ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡರಿಕ್ ಎಂಗೆಲ್ಸ್

# ಕಮ್ಯುನಿಸ್ಟ್ ಪಕ್ಷದ ಪ್ರಣಾಳಿಕೆ

ಒಂದು ಪ್ರೇತ ಭೀತಿ ಯುರೋಪನ್ನು ಕಾಡುತ್ತಿದೆ-ಕಮ್ಯುನಿಸಂನ ಭೀತಿ. ಈ ಭೀತಿಯ ಉಚ್ಚಾಟನೆಗಾಗಿ ಹಳೆಯ ಯೂರೋಪಿನ ಎಲ್ಲ ಶಕ್ತಿಗಳೂ-ಪೋಪ್ ಹಾಗೂ ಝಾರ್, ಮೆಟರ್ನಿಕ್ ಹಾಗೂ ಗಿಝೋ, ಫ್ರೆಂಚ್ ರ್‍ಯಾಡಿಕಲ್‌ಗಳು[1] ಮತ್ತು ಜರ್ಮನ್ ಪೊಲೀಸ್ ಗುಪ್ತಚಾರರು-ಒಂದು ಪವಿತ್ರ ಕೂಟವನ್ನು ಏರ್ಪಡಿಸಿಕೊಂಡಿದ್ದಾರೆ.

ಅಧಿಕಾರದಲ್ಲಿರುವ ಎದುರಾಳಿಗಳಿಂದ ಕಮ್ಯುನಿಸ್ಟ್ ತರದ್ದು ಎಂದು ತೆಗಳಲ್ಪಡದಿರುವ ವಿರೋಧ ಪಕ್ಷ ಎಲ್ಲಿದೆ? ತನ್ನ ಮೇಲಿನ ಕಮ್ಯುನಿಸಂನ ಹಣೆಪಟ್ಟಿಯ ನಿಂದನೆಯನ್ನು ಹೆಚ್ಚು ಮುಂದುವರಿದ ವಿರೋಧ ಪಕ್ಷಗಳ ಮೇಲೆಯೂ, ತನ್ನ ಪ್ರತಿಗಾಮಿ ಶತ್ರುಗಳ ಮೇಲೆಯೂ ಹಿಂದಿರುಗಿ ಎಸೆಯದ ವಿರೋಧ ಪಕ್ಷವಾದರೂ ಎಲ್ಲಿದೆ?

ಈ ಸಂಗತಿಯಿಂದ ಎರಡು ವಿಷಯಗಳು ಹೊಮ್ಮುತ್ತವೆ;

1. ಕಮ್ಯುನಿಸಂ ಸ್ವತಃ ಒಂದು ಶಕ್ತಿಯಾಗಿದೆ ಎಂದು ಈಗಾಗಲೇ ಎಲ್ಲ ಯೂರೋಪಿಯನ್ ಶಕ್ತಿಗಳು ಒಪ್ಪಿಕೊಂಡಿವೆ.

2. ಕಮ್ಯುನಿಸ್ಟರು ಬಹಿರಂಗವಾಗಿಯೇ ಇಡೀ ಜಗತ್ತಿನ ಮುಂದೆ ತಮ್ಮ ನೋಟಗಳನ್ನು, ತಮ್ಮ ಗುರಿಗಳನ್ನು, ತಮ್ಮ ಒಲವುಗಳನ್ನು ಪ್ರಕಟಪಡಿಸಿ ಕಮ್ಯೂನಿಸಂ ಎಂಬ ಪ್ರೇತಭೀತಿಯ ಈ ಅಡಗೂಲಜ್ಜಿ ಕಥೆಗೆ ಎದುರಾಗಿ ಪಕ್ಷದ್ದೇ ಸ್ವಂತ ಪ್ರಣಾಳಿಕೆಯನ್ನು ಪ್ರಸ್ತುತ ಪಡಿಸಲು ಇದೀಗ ಸಕಾಲ.

ಈ ಗುರಿ ಸಾಧನೆಗಾಗಿ ವಿವಿಧ ರಾಷ್ಟ್ರೀಯತೆಗಳ ಕಮ್ಯುನಿಸ್ಟರು ಲಂಡನ್ನಿನಲ್ಲಿ ಸಮಾವೇಶಗೊಂಡಿದ್ದಾರೆ, ಮತ್ತು ಈ ಮುಂದಿನ ಪ್ರಣಾಳಿಕೆಯನ್ನು ಇಂಗ್ಲಿಷ್, ಫ್ರೆಂಚ್, ಜರ್ಮನ್, ಇಟಾಲಿಯನ್, ಫ್ಲೆಮಿಷ್ ಹಾಗೂ ಡೇನಿಷ್ ಭಾಷೆಗಳಲ್ಲಿ ಪ್ರಕಟಿಸುವುದಕ್ಕಾಗಿ ರೂಪಿಸಿದ್ದಾರೆ.

# 1. ಬೂರ್ಜ್ವಾಗಳು ಮತ್ತು ಶ್ರಮಜೀವಿಗಳು[1]

ಇದುವರೆಗೂ ಅಸ್ತಿತ್ವದಲ್ಲಿರುವ ಸಮಾಜದ ಇತಿಹಾಸವು[2] ವರ್ಗ ಹೋರಾಟಗಳ ಇತಿಹಾಸವೇ ಆಗಿದೆ.

ಸ್ವತಂತ್ರ ಮನುಷ್ಯ ಮತ್ತು ಗುಲಾಮ, ಕುಲೀನ ಹಾಗೂ ಸಾಮಾನ್ಯ ಪ್ರಜೆ, ಪ್ರಭು ಹಾಗೂ ತೊತ್ತು, ಗಿಲ್ಡ್ ಮಾಸ್ಟರ್ ಹಾಗೂ ಜರ್ನಿಮನ್[3], ಒಂದು ಮಾತಿನಲ್ಲಿ ದಮನಕೋರರು ಹಾಗೂ ದಮನಕ್ಕೊಳಗಾದವರು, ಒಬ್ಬರಿಗೊಬ್ಬರು ಸದಾ ಎದುರಾಳಿಗಳಾಗಿ ನಿಂತು ಅವಿರತವಾಗಿ, ಒಮ್ಮೆ ಅಗೋಚರವಾಗಿ, ಒಮ್ಮೆ ಬಹಿರಂಗವಾಗಿ ಸೆಣಸುತ್ತಾ ಬಂದಿದ್ದಾರೆ. ಪ್ರತಿಬಾರಿಯೂ ಈ ಸೆಣಸಾಟ, ಒಂದೋ ಒಟ್ಟಾರೆ ಸಮಾಜದ ಕ್ರಾಂತಿಕಾರಿ ಪುನರ್ರಚನೆಯಲ್ಲಿ, ಇಲ್ಲವೇ ಕಾದಾಡುತ್ತಿರುವ ವರ್ಗಗಳ ಒಟ್ಟು ನಾಶದಲ್ಲಿ ಕೊನೆಗಂಡಿತು.

ಇತಿಹಾಸದ ಈ ಹಿಂದಿನ ಯುಗಗಳಲ್ಲಿ ಬಹುಮಟ್ಟಿಗೆ ಎಲ್ಲೆಲ್ಲೂ ಸಮಾಜವನ್ನು ನಾನಾ ಸ್ಥಾನಮಾನಗಳ, ಸಾಮಾಜಿಕ ದರ್ಜೆಗಳ ವಿವಿಧ ಸ್ತರಗಳಾಗಿ ಮಾಡಿದ್ದ ಸಂಕೀರ್ಣ ವ್ಯವಸ್ಥೆಯನ್ನು ಕಾಣುತ್ತೇವೆ. ಪುರಾತನ ರೋಮ್‌ನಲ್ಲಿ ಪ್ಯಾಟ್ರೀಷಿಯನ್ನರು, ನೈಟ್‌ಗಳು, ಪ್ಲೆಬಿಯನ್ನರು, ಗುಲಾಮರು ಎಂದಿದ್ದರು; ಮಧ್ಯಯುಗದಲ್ಲಿ ಪಾಳೆಯಗಾರೀ ಪ್ರಭುಗಳು, ಅವರ ಸಾಮಂತರು, ಗಿಲ್ಡ್ ಮಾಸ್ಟರುಗಳು, ಜರ್ನಿಮನ್‌ಗಳು, ಅಪ್ರೆಂಟಿಸ್‌ಗಳು, ತೊತ್ತುಗಳು ಇದ್ದರು[4]; ಸುಮಾರಾಗಿ ಈ ಎಲ್ಲಾ ವರ್ಗಗಳಲ್ಲಿ ಮತ್ತೆ ಉಪಸ್ತರಗಳು ಇದ್ದವು.

ಪಾಳೆಯಗಾರಿ ಸಮಾಜದ ಭಗ್ನಾವಶೇಷಗಳಿಂದ ಚಿಗುರಿದ ಆಧುನಿಕ ಬೂರ್ಜ್ವಾ ಸಮಾಜವು ವರ್ಗವೈಷಮ್ಯಗಳನ್ನೇನೂ ತೊಡೆದುಹಾಕಲಿಲ್ಲ. ಬದಲು ಅದು ಹಳೆಯವುಗಳ ಸ್ಥಳದಲ್ಲಿ ಹೊಸ ವರ್ಗಗಳನ್ನು, ಹೊಸ ದಮನದ ಪರಿಸ್ಥಿತಿಗಳನ್ನು ಮತ್ತು ಹೋರಾಟದ ಹೊಸ ಸ್ವರೂಪಗಳನ್ನು ಸ್ಥಾಪಿಸಿದೆ.

ಆದರೆ ನಮ್ಮ ಯುಗವು, ಬೂರ್ಜ್ವಾ ವರ್ಗದ ಯುಗವು, ಈ ವಿಶಿಷ್ಟ ಲಕ್ಷಣವನ್ನು ಹೊಂದಿದೆ: ಅದು ವರ್ಗವೈಷಮ್ಯಗಳನ್ನು ಸರಳಗೊಳಿಸಿದೆ. ಸಮಾಜವು ಇಡೀಯಾಗಿ ಎರಡು ಮಹಾ ಶತ್ರುತ್ವಪೂರ್ಣ ಬಣಗಳಾಗಿ, ಪರಸ್ಪರ ನೇರವಾಗಿ ಮುಖಾಮುಖಿಯಾಗುವ ಎರಡು ಮಹಾ ವರ್ಗಗಳಾಗಿ–ಬೂರ್ಜ್ವಾ ವರ್ಗ ಹಾಗೂ ಶ್ರಮಜೀವಿ ವರ್ಗವಾಗಿ ಹೆಚ್ಚೆಚ್ಚು ವಿಭಜನೆಗೊಳ್ಳುತ್ತಿದೆ.

ಮಧ್ಯಯುಗದ ಜೀತದಾಳುಗಳ ಮಧ್ಯದಿಂದ ಮೊಟ್ಟಮೊದಲ ಪಟ್ಟಣಗಳ ಮಾನ್ಯತೆ ಪಡೆದ ಪೌರರು ಉದ್ಭವಿಸಿದರು. ಈ ಪೌರರಿಂದ ಬೂರ್ಜ್ವಾ ವರ್ಗದ ಮೊದಲ ಅಂಶಗಳು ಬೆಳೆದು ಬಂದವು.

ಅಮೇರಿಕವನ್ನು ಕಂಡುಹಿಡಿದುದು, ಕೇಪ್ ಭೂಶಿರವನ್ನು ಬಳಸಿ ಸಮುದ್ರಯಾನ ಮಾಡಿದುದು, ಪ್ರವರ್ಧಮಾನಕ್ಕೆ ಬರುತ್ತಿದ್ದ ಬೂರ್ಜ್ವಾ ವರ್ಗಕ್ಕೆ ಹೊಸ ನೆಲೆಗಳನ್ನು

---

* ಅಂದರೆ ಎಲ ಲಿಖಿತ ಇತಿಹಾಸ...

ತೆರೆದು ಕೊಟ್ಟವು. ಈಸ್ಟ್ ಇಂಡಿಯಾ ಮತ್ತು ಚೀಣೀ ಮಾರುಕಟ್ಟೆಗಳು, ಅಮೆರಿಕದ ವಸಾಹತೀಕರಣ, ವಸಾಹತುಗಳೊಂದಿಗೆ ವ್ಯಾಪಾರ, ವಿನಿಮಯ ಸಾಧನಗಳಲ್ಲಿ ಮತ್ತು ಒಟ್ಟಾರೆಯಾಗಿ ಸರಕುಗಳಲ್ಲಿ ಹೆಚ್ಚಳ, ಇವು ವಾಣಿಜ್ಯಕ್ಕೆ, ಸಮುದ್ರಯಾನಕ್ಕೆ, ಉದ್ದಿಮೆಗೆ ಹಿಂದೆಂದೂ ಕಂಡರಿಯದಷ್ಟು ಉತ್ತೇಜನೆ ನೀಡಿದವು, ತನ್ಮೂಲಕ ತತ್ತರಿಸುತ್ತಿದ್ದ ಪಾಳೆಯಗಾರಿ ಸಮಾಜದಲ್ಲಿನ ಕ್ರಾಂತಿಕಾರೀ ಅಂಶ ತ್ವರಿತವಾಗಿ ಬೆಳೆಯುವುದಕ್ಕೆ ಉತ್ತೇಜನೆ ನೀಡಿದವು.

ಉತ್ಪಾದನೆಯ ಮೇಲೆ ಪರಿಮಿತ ಗಿಲ್ಡ್‌ಗಳ ಏಕಸ್ವಾಮ್ಯವಿದ್ದ ಊಳಿಗಮಾನ್ಯ ಉದ್ದಿಮೆಯ ಪದ್ಧತಿ[5] ಹೊಸ ಮಾರುಕಟ್ಟೆಗಳ ಹೆಚ್ಚುತ್ತಿದ್ದ ಅಗತ್ಯಗಳನ್ನು ಪೂರೈಸಲು ಎಷ್ಟು ಮಾತ್ರವೂ ಸಾಲದಾಯಿತು. ಹಾಗಾಗಿ ಅದರ ಜಾಗದಲ್ಲಿ ಕೈಗಾರಿಕಾ ಪದ್ಧತಿಯು[6] ಬಂತು. ಗಿಲ್ಡ್ ಮಾಸ್ಟರುಗಳನ್ನು ಈ ಕೈಗಾರಿಕಾ ಮಧ್ಯಮ ವರ್ಗದವರು[7] ಒಂದು ಬದಿಗೆ ತಳ್ಳಿದರು. ಪ್ರತಿಯೊಂದು ಕಾರ್ಯಾಗಾರದಲ್ಲಿನ ಶ್ರಮವಿಭಜನೆಯ ಎದುರಲ್ಲಿ ವಿಭಿನ್ನ ಕಾರ್ಪೊರೇಟ್ ಗಿಲ್ಡ್‌ಗಳ ನಡುವಿನ ಶ್ರಮ ವಿಭಜನೆಯು ಕಣ್ಮರೆಯಾಯಿತು.

ಈ ಮಧ್ಯೆ ಮಾರುಕಟ್ಟೆಗಳು ಸತತವಾಗಿ ಬೆಳೆಯುತ್ತಾ ಹೋದವು, ಬೇಡಿಕೆ ಸತತವಾಗಿ ಏರುತ್ತಾ ಹೋಯಿತು. ಕೈಗಾರಿಕೆಯೂ ಸಾಲದಾಯಿತು. ಅದಾದ ಮೇಲೆ ಉಗಿ ಹಾಗೂ ಯಂತ್ರಗಳು ಔದ್ಯಮಿಕ ಉತ್ಪಾದನೆಯನ್ನು ಕ್ರಾಂತಿಕಾರಕಗೊಳಿಸಿದವು. ಕೈಗಾರಿಕೆಯ ಜಾಗವನ್ನು ಬೃಹತ್, ಆಧುನಿಕ ಉದ್ದಿಮೆಯು ಪಡೆಯಿತು. ಕೈಗಾರಿಕಾ ಮಧ್ಯಮ ವರ್ಗದ ಜಾಗದಲ್ಲಿ ಔದ್ಯಮಿಕ ಮಿಲಿಯಾಧಿಪತಿಗಳು, ಇಡೀ ಔದ್ಯಮಿಕ ಸೇನೆಗಳ ನಾಯಕರು, ಆಧುನಿಕ ಬೂರ್ಜ್ವಾಗಳು ಬಂದರು.

ಆಧುನಿಕ ಉದ್ದಿಮೆ ಜಾಗತಿಕ ಮಾರುಕಟ್ಟೆಯೊಂದನ್ನು ಸ್ಥಾಪಿಸಿದೆ. ಅಮೇರಿಕಾದ ಶೋಧನೆ ಇದಕ್ಕೆ ದಾರಿ ಮಾಡಿಕೊಟ್ಟಿತು. ಈ ಜಾಗತಿಕ ಮಾರುಕಟ್ಟೆಯು ವಾಣಿಜ್ಯ, ಸಮುದ್ರಯಾನ, ಹಾಗೂ ಭೂಮಾರ್ಗ ಸಂಪರ್ಕಗಳನ್ನು ಅಪಾರವಾಗಿ ಅಭಿವೃದ್ಧಿಗೊಳಿಸಿದೆ. ಈ ಅಭಿವೃದ್ಧಿಯ ಪ್ರತಿಕ್ರಿಯೆ ಉದ್ದಿಮೆಯ ವಿಸ್ತರಣೆಯ ಮೇಲೆ ಆಗಿದೆ; ಉದ್ದಿಮೆ, ವಾಣಿಜ್ಯ, ಸಮುದ್ರಯಾನ ಹಾಗೂ ರೈಲು ಮಾರ್ಗಗಳ ವಿಸ್ತರಣೆಗೆ ಅನುಗುಣವಾಗಿ ಅದೇ ಪ್ರಮಾಣದಲ್ಲಿ ಬೂರ್ಜ್ವಾ ವರ್ಗವೂ ಬೆಳವಣಿಗೆ ಕಂಡಿತು, ತನ್ನ ಬಂಡವಾಳವನ್ನು ಹೆಚ್ಚಿಸಿಕೊಂಡಿತು ಮತ್ತು ಮಧ್ಯಯುಗದಿಂದ ಬಂದಿದ್ದ ಪ್ರತಿಯೊಂದು ವರ್ಗವನ್ನೂ ಹಿನ್ನೆಲೆಗೆ ತಳ್ಳಿತು.

ಆದ್ದರಿಂದ, ಆಧುನಿಕ ಬೂರ್ಜ್ವಾಗಳೇ ಹೇಗೆ ಬಹುಕಾಲದ ಬೆಳವಣಿಗೆಯ ಮತ್ತು ಉತ್ಪಾದನಾ ಹಾಗೂ ವಿನಿಮಯ ವಿಧಾನಗಳಲ್ಲಿನ ಕ್ರಾಂತಿಗಳ ಒಂದು ಸರಣಿಯ ಉತ್ಪನ್ನವಾಗಿದ್ದಾರೆ ಎಂಬುದನ್ನು ನಾವು ಕಾಣುತ್ತೇವೆ.

ಬೂರ್ಜ್ವಾಗಳ ಬೆಳವಣಿಗೆಯ ಪ್ರತಿಯೊಂದು ಹೆಜ್ಜೆಯ ಜೊತೆಗೇ, ಅದಕ್ಕನುಗುಣವಾಗಿ, ಆ ವರ್ಗದ ರಾಜಕೀಯ ಮುನ್ನಡೆಯೂ ಉಂಟಾಯಿತು. ಪಾಳೆಯಗಾರಿ ಕುಲೀನರ ಅಂಕೆಯಲ್ಲಿ ದಮನಕ್ಕೊಳಗಾಗಿದ್ದ ಒಂದು ವರ್ಗ, ಮಧ್ಯಯುಗದ ಕಮ್ಯೂನ್[8]ನಲ್ಲಿ ಒಂದು ಶಸ್ತ್ರಸಜ್ಜಿತ, ಸ್ವಯಮಾಡಳಿತ ಸಂಘ, ಇಲ್ಲಿ ಸ್ವತಂತ್ರ ನಗರೀಯ ಗಣತಂತ್ರ(ಇಟಲಿ

ಹಾಗೂ ಜರ್ಮನಿಗಳಲ್ಲಿರುವಂತೆ), ಅಲ್ಲಿ ರಾಜಪ್ರಭುತ್ವದ ತೆರಿಗೆ ಹಾಕಬಹುದಾದ "ತೃತೀಯ ವ್ಯವಸ್ಥೆ" (ಫ್ರಾನ್ಸ್‌ನಲ್ಲಿದ್ದಂತೆ), ಅನಂತರ ಕೈಗಾರಿಕೆಯ ಅವಧಿಯಲ್ಲಿ, ಕುಲೀನ ವರ್ಗಕ್ಕೆ ವಿರುದ್ಧವಾಗಿ ಅದನ್ನು ಸರಿಗಟ್ಟುವುದಕ್ಕಾಗಿ ಅರೆ-ಪಾಳೆಯಗಾರಿ ಇಲ್ಲವೇ ನಿರಂಕುಶ ರಾಜಪ್ರಭುತ್ವಕ್ಕೆ ಸೇವೆ ಸಲ್ಲಿಸುವ ವರ್ಗ; ವಾಸ್ತವವಾಗಿ, ಒಟ್ಟಿನಲ್ಲಿ ಮಹಾ ರಾಜಪ್ರಭುತ್ವಗಳ ಮೂಲಾಧಾರವಾಗಿದ್ದ ಬೂರ್ಜ್ವಾ ವರ್ಗ, ಅಂತಿಮವಾಗಿ, ಆಧುನಿಕ ಉದ್ದಿಮೆ ಹಾಗೂ ಜಾಗತಿಕ ಮಾರುಕಟ್ಟೆ ಸ್ಥಾಪನೆಯಾದಂದಿನಿಂದ ಆಧುನಿಕ ಪ್ರಾತಿನಿಧಿಕ ಪ್ರಭುತ್ವದಲ್ಲಿ, ತನ್ನದೇ ಆದ ರಾಜಕೀಯ ಅಧಿಪತ್ಯವನ್ನು ಗೆದ್ದುಕೊಂಡಿತು. ಆಧುನಿಕ ಪ್ರಭುತ್ವದ ಕಾರ್ಯಾಂಗ ಇಡೀ ಬೂರ್ಜ್ವಾ ವರ್ಗದ ಸಾಮಾನ್ಯ ವ್ಯವಹಾರಗಳನ್ನೆಲ್ಲ ನಿರ್ವಹಿಸಲು ಇರುವ ಒಂದು ಸಮಿತಿಯಷ್ಟೇ ಆಗಿದೆ.

ಬೂರ್ಜ್ವಾ ವರ್ಗವು ಚಾರಿತ್ರಿಕವಾಗಿ ಒಂದು ಅತ್ಯಂತ ಕ್ರಾಂತಿಕಾರಿ ಪಾತ್ರವನ್ನು ನಿರ್ವಹಿಸಿದೆ.

ಬೂರ್ಜ್ವಾ ವರ್ಗ, ಎಲ್ಲೆಲ್ಲಿ ಮೇಲುಗೈ ಪಡೆಯಿತೋ ಅಲ್ಲಿ ಪಾಳೆಯಗಾರಿ, ಪಿತೃಪ್ರಧಾನ, ಸಹಜ-ಸುಂದರ ಸಂಬಂಧಗಳನ್ನೆಲ್ಲ ಕೊನೆಗಾಣಿಸಿದೆ. ಮನುಷ್ಯನನ್ನು ಅವನ 'ಸಹಜ ಶ್ರೇಷ್ಠ'ರೊಂದಿಗೆ ಬಂಧಿಸಿದ್ದ ಬಗೆಬಗೆಯ ಪಾಳೆಯಗಾರಿ ಬಂಧಗಳನ್ನು ಅದು ನಿಷ್ಕರುಣೆಯಿಂದ ಹರಿದು ಚೆಲ್ಲಿದೆ, ಮತ್ತು ಮನುಷ್ಯ-ಮನುಷ್ಯರ ನಡುವೆ ನಗ್ನ ಸ್ವ-ಹಿತಾಸಕ್ತಿಯ ಹೊರತು, ನಿರ್ಲಕ್ಷ್ಯದ 'ನಗದು ಪಾವತಿ'ಯ ಹೊರತು, ಬೇರಾವ ನಂಟನ್ನೂ ಅದು ಉಳಿಯಲು ಬಿಟ್ಟಿಲ್ಲ. ಅದು ಧಾರ್ಮಿಕ ಉತ್ಕಟತೆಯ, ವೀರೋಚಿತ ಹುರುಪಿನ, ಶುಷ್ಕ ಭಾವುಕತೆಯ ಅತ್ಯಂತ ದಿವ್ಯ ಆನಂದಪರವಶತೆಗಳನ್ನು, ಸ್ವಾರ್ಥ ಸಾಧನೆಯ ಲೆಕ್ಕಾಚಾರದ ತಣ್ಣೀರು ಸುರಿದು ಮುಳುಗಿಸಿ ಬಿಟ್ಟಿದೆ. ಅದು ವೈಯಕ್ತಿಕ ಯೋಗ್ಯತೆಯನ್ನು ವಿನಿಮಯ ಮೌಲ್ಯವಾಗಿ ಪರಿಹರಿಸಿದೆ, ಮತ್ತು ಶಾಸನದತ್ತವಾದ, ರದ್ದು ಮಾಡಲಾಗದಂಥ ಅನೇಕಾನೇಕ ಸ್ವಾತಂತ್ರ್ಯಗಳ ಸ್ಥಳದಲ್ಲಿ ಮುಕ್ತ ವ್ಯಾಪಾರ ಎಂಬ ಆ ಏಕೈಕ, ಆತ್ಮಸಾಕ್ಷಿಯಿಲ್ಲದ ಸ್ವಾತಂತ್ರ್ಯವನ್ನು ಸ್ಥಾಪಿಸಿದೆ. ಒಂದು ಮಾತಿನಲ್ಲಿ ಹೇಳುವುದಾದರೆ, ಧಾರ್ಮಿಕ ಹಾಗೂ ರಾಜಕೀಯ ಭ್ರಾಂತಿಗಳ ಮುಸುಕು ಹೊದ್ದ ಶೋಷಣೆಯ ಸ್ಥಳದಲ್ಲಿ ಅದು ನಗ್ನ, ನಾಚಿಕೆಹೀನ, ನೇರ, ಪಾಶವಿಕ ಶೋಷಣೆಯನ್ನು ಸ್ಥಾಪಿಸಿದೆ.

ಬೂರ್ಜ್ವಾ ವರ್ಗ, ಅದುವರೆಗೂ ಗೌರವಿಸಲ್ಪಡುತ್ತಿದ್ದ, ಭಯ ಭಕ್ತಿಗಳಿಂದ ಕಾಣುತ್ತಿದ್ದ ಪ್ರತಿಯೊಂದು ವೃತ್ತಿಯ ಸುತ್ತಲಿದ್ದ ಪ್ರಭೆಯನ್ನು ಕಿತ್ತೊಗೆದಿದೆ. ಅದು ವೈದ್ಯ, ವಕೀಲ, ಪುರೋಹಿತ, ಕವಿ, ವಿಜ್ಞಾನಿಯನ್ನು ತನ್ನ ಕೂಲಿಯಾಳುಗಳನ್ನಾಗಿ ಪರಿವರ್ತಿಸಿದೆ.

ಬೂರ್ಜ್ವಾ ವರ್ಗ, ಕುಟುಂಬದಿಂದ ಅದರ ಭಾವನಾತ್ಮಕ ಮುಸುಕನ್ನು ಹರಿದು ಬಿಸಾಕಿ ಕುಟುಂಬ ಸಂಬಂಧವನ್ನು ಕೇವಲ ಒಂದು ಹಣ ಸಂಬಂಧದ ಮಟ್ಟಕ್ಕಿಳಿಸಿದೆ.

ಬೂರ್ಜ್ವಾ ವರ್ಗ, ಪ್ರತಿಗಾಮಿಗಳು ಅಷ್ಟೊಂದು ಮೆಚ್ಚುವಂಥ ಮಧ್ಯಯುಗದಲ್ಲಿನ ಪಾಶವಿಕ ಕಸುವಿನ ಪ್ರದರ್ಶನಕ್ಕೆ ತಕ್ಕುದಾದ ಪೂರಕ ಅಂಶವನ್ನು ಅತ್ಯಂತ ಆಲಸ್ಯಪೂರ್ಣ

ಮೃಗೀಯತನವಾಗಿ ಹೇಗೆ ಕಂಡಿದೆ ಎಂಬುದನ್ನು ಬಹಿರಂಗ ಪಡಿಸಿದೆ. ಮಾನವನ ಚಟುವಟಿಕೆಯು ಏನು ಸಾಧಿಸಬಲ್ಲುದು ಎಂಬುದನ್ನು ಅದು ಮೊದಲ ಬಾರಿಗೆ ತೋರಿಸಿಕೊಟ್ಟಿದೆ. ಅದು ಈಜಿಪ್ಟಿನ ಪಿರಮಿಡ್ಡುಗಳನ್ನು, ರೋಮ್‌ನ ತೂಗುನಾಲೆಗಳನ್ನು, ಬೃಹತ್ ಗಾಥಿಕ್ ಚರ್ಚುಗಳನ್ನು ಬಹುವಾಗಿ ಮೀರಿಸುವಂಥ ಅದ್ಭುತಗಳನ್ನು ಸಾಧಿಸಿದೆ; ಅದು ಈ ಹಿಂದಿನ ಎಲ್ಲ ಮಹಾ ದೇಶಾಂತರಗಳನ್ನು ಮತ್ತು ಧರ್ಮಯುದ್ಧಗಳನ್ನು ನಾಚಿಸುವಂಥ ದಂಡಯಾತ್ರೆಗಳನ್ನು ನಡೆಸಿದೆ.

ಬೂರ್ಜ್ವಾ ವರ್ಗ ಉತ್ಪಾದನಾ ಸಲಕರಣೆಗಳನ್ನು, ಮತ್ತು ತನ್ಮೂಲಕ ಉತ್ಪಾದನಾ ಸಂಬಂಧಗಳನ್ನು ಮತ್ತು ಅವುಗಳೊಂದಿಗೆ ಇಡೀ ಸಮಾಜದ ಸಂಬಂಧಗಳನ್ನು ಸತತವಾಗಿ ಕ್ರಾಂತಿಕಾರಕಗೊಳಿಸದೆ ಅಸ್ತಿತ್ವದಲ್ಲಿ ಇರಲು ಸಾಧ್ಯವೇ ಇಲ್ಲ. ತದ್ವಿರುದ್ಧವಾಗಿ ಹಳೆಯ ಉತ್ಪಾದನಾ ವಿಧಾನಗಳನ್ನು ಬದಲಿಸದೆ ಉಳಿಸಿಕೊಂಡು ಹೋಗುವುದು ಈ ಹಿಂದಿನ ಎಲ್ಲ ಔದ್ಯಮಿಕ ವರ್ಗಗಳ ಅಸ್ತಿತ್ವದ ಮೊದಲ ಶರತ್ತಾಗಿದ್ದಿತು. ಸತತವಾಗಿ ಉತ್ಪಾದನೆಯನ್ನು ಕ್ರಾಂತಿಕಾರಕಗೊಳಿಸುವುದು, ಎಲ್ಲ ಸಾಮಾಜಿಕ ಪರಿಸ್ಥಿತಿಗಳನ್ನು ಅಡೆ–ತಡೆಯಿಲ್ಲದೆ ಕದಡುವುದು ಮತ್ತು ಶಾಶ್ವತವಾದ ಅನಿಶ್ಚಿತತೆ ಹಾಗೂ ಆಂದೋಲನ ಬೂರ್ಜ್ವಾ ಯುಗವನ್ನು ಹಿಂದಿನ ಎಲ್ಲದಕ್ಕಿಂತ ಭಿನ್ನವಾಗಿಸಿವೆ. ಎಲ್ಲ ಸ್ಥಾಯೀ, ಹೆಪ್ಪುಗಟ್ಟಿದ ಸಂಬಂಧಗಳನ್ನು, ಅವುಗಳನ್ನು ಹಿಂಬಾಲಿಸಿ ಬಂದಿರುವ ಪುರಾತನ ಹಾಗೂ ಗೌರವಾರ್ಹ ಪೂರ್ವಾಗ್ರಹಗಳು ಮತ್ತು ಅಭಿಪ್ರಾಯಗಳನ್ನೆಲ್ಲ ಗುಡಿಸಿ ಹಾಕಲಾಗುತ್ತಿದೆ, ಹೊಸದಾಗಿ ರೂಪಿತಗೊಂಡವುಗಳೆಲ್ಲ ಜಡ್ಡುಗಟ್ಟುವ ಮೊದಲೇ ಹಳಸಲಾಗುತ್ತಿವೆ. ಗಡುಸಾಗಿರುವುದೆಲ್ಲ ಗಾಳಿಯಲ್ಲಿ ಕರಗಿ ಹೋಗುತ್ತವೆ. ಪವಿತ್ರವಾದುವೆಲ್ಲವನ್ನು ಅಪವಿತ್ರಗೊಳಿಸಲಾಗುತ್ತಿದೆ, ಮತ್ತು ಮನುಷ್ಯನು ಕಟ್ಟಕಡೆಗೆ ನಿರುದ್ವಿಗ್ನ ಭಾವದಿಂದ ತನ್ನ ಜೀವನದ ನಿಜ ಪರಿಸ್ಥಿತಿಗಳನ್ನು, ತನ್ನಂತಹವರೊಂದಿಗೆ ತನ್ನ ಸಂಬಂಧಗಳನ್ನು ಎದುರಿಸುವ ಬಲವಂತಕ್ಕೆ ಒಳಗಾಗುತ್ತಾನೆ.

ತನ್ನ ಉತ್ಪನ್ನಗಳಿಗೆ ಸತತವಾಗಿ ಮಾರುಕಟ್ಟೆಯನ್ನು ವಿಸ್ತರಿಸುವ ಅಗತ್ಯವು ಬೂರ್ಜ್ವಾಗಳನ್ನು ಭೂಮಂಡಲದ ಮೇಲೆಲ್ಲಾ ಓಡಾಡಿಸುತ್ತದೆ. ಅದು ಎಲ್ಲೆಡೆಗಳಲ್ಲೂ ಗೂಡು ಕಟ್ಟಬೇಕು, ಎಲ್ಲೆಡೆಗಳಲ್ಲೂ ತಳ ಊರಬೇಕು, ಎಲ್ಲೆಡೆಗಳಲ್ಲೂ ಸಂಬಂಧಗಳನ್ನು ಸ್ಥಾಪಿಸಿಕೊಳ್ಳಬೇಕು.

ಬೂರ್ಜ್ವಾ ವರ್ಗವು ವಿಶ್ವ ಮಾರುಕಟ್ಟೆಯನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡು ಪ್ರತಿಯೊಂದು ದೇಶದಲ್ಲೂ ಉತ್ಪಾದನೆ ಹಾಗೂ ಬಳಕೆಗಳಿಗೆ ಒಂದು ವಿಶ್ವವ್ಯಾಪೀ ಸ್ವರೂಪವನ್ನು ನೀಡಿದೆ. ಉದ್ದಿಮೆ ಯಾವ ರಾಷ್ಟ್ರೀಯ ನೆಲೆಯ ಮೇಲೆ ನಿಂತಿದೆಯೋ ಅದನ್ನು ಕಿತ್ತು ಹಾಕಿ ಪ್ರತಿಗಾಮಿಗಳು ಕೊರಗುವಂತೆ ಮಾಡಿದೆ. ಎಲ್ಲ ಹಳೆಯ ಸ್ಥಾಪಿತ ರಾಷ್ಟ್ರೀಯ ಉದ್ದಿಮೆಗಳನ್ನು ನಾಶಮಾಡಲಾಗಿದೆ, ಇಲ್ಲವೇ ಅನುದಿನವೂ ನಾಶ ಮಾಡಲಾಗುತ್ತಿದೆ. ಅವನ್ನು ಹೊಸ ಉದ್ದಿಮೆಗಳು ಹೊರದಬ್ಬುತ್ತಿವೆ. ಈ ಹೊಸ ಉದ್ದಿಮೆಗಳನ್ನು ಆರಂಭಿಸುವುದು ಎಲ್ಲ ನಾಗರಿಕ ರಾಷ್ಟ್ರಗಳಿಗೂ ಒಂದು ಅಳಿವು–ಉಳಿವಿನ ಪ್ರಶ್ನೆಯಾಗುತ್ತದೆ, ಇವೀಗ ದೇಶೀ ಕಚ್ಚಾ ಸಾಮಗ್ರಿಗಳಿಂದ ಕೆಲಸ ಮಾಡುವಂತಹವುಗಳಲ್ಲ, ದೂರ ದೂರ ಪ್ರದೇಶಗಳಿಂದೆಲ್ಲಾ ಕಚ್ಚಾ ಸಾಮಗ್ರಿಗಳನ್ನು

ತರಿಸಿಕೊಳ್ಳುವ ಉದ್ದಿಮೆಗಳು; ಇವುಗಳ ಉತ್ಪನ್ನಗಳನ್ನು ಸ್ವದೇಶದಲ್ಲಷ್ಟೇ ಅಲ್ಲ ಭೂಮಂಡಲದ ಪ್ರತಿಯೊಂದು ಭಾಗದಲ್ಲಿಯೂ ಬಳಸಲಾಗುತ್ತಿದೆ. ಆಯಾ ದೇಶದ ಉತ್ಪಾದನೆಯಿಂದಲೇ ತೃಪ್ತಗೊಳ್ಳುತ್ತಿದ್ದ ಹಳೆಯ ಅವಶ್ಯಕತೆಗಳ ಸ್ಥಳದಲ್ಲಿ ಹೊಸ ಅವಶ್ಯಕತೆಗಳನ್ನು ನಾವು ಕಾಣುತ್ತೇವೆ; ಈ ಅವಶ್ಯಕತೆಗಳನ್ನು ಪೂರೈಸಲು ದೂರದ ನಾಡುಗಳ, ವಾಯುಗುಣಗಳ ಉತ್ಪನ್ನಗಳು ಅಗತ್ಯವಾಗಿವೆ. ಹಳೆಯ ಸ್ಥಳೀಯ ಹಾಗೂ ರಾಷ್ಟ್ರೀಯ ಏಕಾಂಗಿತನ ಹಾಗೂ ಸ್ವಯಂಪೂರ್ಣತೆಯ ಜಾಗದಲ್ಲಿ ನಾವು ಪ್ರತಿಯೊಂದು ದಿಶೆಯಲ್ಲೂ ಹೊಕ್ಕು-ಬಳಕೆ ಮತ್ತು ರಾಷ್ಟ್ರಗಳ ನಡುವೆ ಸಾರ್ವತ್ರಿಕ ಪರಸ್ಪರ-ಅವಲಂಬನೆಯನ್ನು ಕಾಣುತ್ತೇವೆ. ವಸ್ತುಗಳ ಉತ್ಪಾದನೆಯಲ್ಲಿರುವಂತೆಯೇ ಬೌದ್ಧಿಕ ಉತ್ಪಾದನೆಯಲ್ಲಿಯೂ. ಪ್ರತಿಯೊಂದು ದೇಶದ ಬೌದ್ಧಿಕ ಸೃಷ್ಟಿಗಳು ಸರ್ವಸಾಮಾನ್ಯ ಸೊತ್ತಾಗುತ್ತವೆ. ರಾಷ್ಟ್ರೀಯ ಏಕಪಕ್ಷೀಯತೆ ಹಾಗೂ ಸಂಕುಚಿತ ಮನೋಭಾವಗಳು ಹೆಚ್ಚೆಚ್ಚು ಅಸಾಧ್ಯವಾಗುತ್ತವೆ, ಮತ್ತು ಅನೇಕಾನೇಕ ರಾಷ್ಟ್ರೀಯ ಹಾಗೂ ಸ್ಥಳೀಯ ಸಾಹಿತ್ಯಗಳಿಂದ ವಿಶ್ವ ಸಾಹಿತ್ಯವು ಉದಯವಾಗುತ್ತದೆ.

ಬೂರ್ಜ್ವಾ ವರ್ಗ, ಎಲ್ಲ'ಉತ್ಪಾದನಾ ಸಲಕರಣೆಗಳನ್ನು ತ್ವರಿತವಾಗಿ ಉತ್ತಮಪಡಿಸುವ ಮೂಲಕ, ಸಂಪರ್ಕ ಸಾಧನಗಳ ಅಪಾರ ಸೌಲಭ್ಯಗಳ ಮೂಲಕ, ಎಲ್ಲ ರಾಷ್ಟ್ರಗಳನ್ನೂ, ನಾಗರಿಕತೆಯಿಂದ ಬಹಳ ದೂರವಿರುವ ರಾಷ್ಟ್ರಗಳನ್ನೂ ಸಹ, ನಾಗರಿಕತೆಯತ್ತ ಸೆಳೆಯುತ್ತದೆ. ಅದು ಉತ್ಪಾದಿಸುವ ಸರಕುಗಳ ಅಗ್ಗದ ಬೆಲೆಗಳೇ ಅದರ ಭಾರಿ ಫಿರಂಗಿ ದಳ, ಇದರಿಂದ ಅದು ಅಡ್ಡ ನಿಲ್ಲುವ ಎಲ್ಲ ಚೀಣೀಗೋಡೆಗಳನ್ನೂ ಪುಡಿಗುಟ್ಟುತ್ತದೆ, ನಾಗರಿಕತೆಯಿಂದ ದೂರ ಉಳಿದವರು ವಿದೇಶೀಯರ ಬಗ್ಗೆ ಹೊಂದಿರುವ ಬದ್ಧದ್ವೇಷವೂ ಶರಣಾಗುವಂತೆ ಬಲವಂತ ಮಾಡುತ್ತದೆ. ಅದು ಎಲ್ಲಾ ದೇಶಗಳನ್ನು, ಅವು ಬೂರ್ಜ್ವಾ ಉತ್ಪಾದನಾ ವಿಧಾನವನ್ನು ಅಂಗೀಕರಿಸಬೇಕು, ಇಲ್ಲವೇ ಅಳಿದು ಹೋಗುವ ನೋವನ್ನು ಅನುಭವಿಸಬೇಕು ಎಂಬ ಆಗ್ರಹಕ್ಕೆ ಒಳಪಡಿಸುತ್ತದೆ; ತಾನು ಏನನ್ನು ನಾಗರಿಕತೆ ಎಂದು ಕರೆಯುತ್ತದೆಯೋ ಅದನ್ನು ಅವುಗಳ ಮಧ್ಯೆಯೂ ತರುವಂತೆ, ಅಂದರೆ ಅವುಗಳೂ ಸ್ವತಃ ಬೂರ್ಜ್ವಾ ಆಗುವಂತೆ ಬಲಾತ್ಕರಿಸುತ್ತದೆ. ಒಂದು ಮಾತಿನಲ್ಲಿ ಹೇಳುವುದಾದರೆ, ಅದು ತನ್ನದೇ ಬಿಂಬದಂತಿರುವ ಒಂದು ಜಗತ್ತನ್ನು ಸೃಷ್ಟಿಸುತ್ತದೆ.

ಬೂರ್ಜ್ವಾ ವರ್ಗ ಹಳ್ಳಿಗಳನ್ನು ಪಟ್ಟಣಗಳ ಆಳ್ವಿಕೆಗೆ ಒಳಪಡಿಸಿದೆ. ಅದು ಬಹು ದೊಡ್ಡದಾದ ನಗರಗಳನ್ನು ನಿರ್ಮಿಸಿದೆ, ಗ್ರಾಮಾಂತರಕ್ಕೆ ಹೋಲಿಸಿದಂತೆ ನಗರಗಳ ಜನಸಂಖ್ಯೆಯನ್ನು ಬಹುಮಟ್ಟಿಗೆ ಹೆಚ್ಚಿಸಿದೆ. ಹೀಗೆ ಅದು ಜನಸಂಖ್ಯೆಯ ಗಣನೀಯ ಭಾಗವನ್ನು ಗ್ರಾಮಾಂತರ ಜೀವನದ ಹೆಡ್ಡತನದಿಂದ ಪಾರು ಮಾಡಿದೆ. ಹಳ್ಳಿಯು ಪಟ್ಟಣಗಳ ಮೇಲೆ ಅವಲಂಬಿಸಿರುವಂತೆ ಮಾಡಿರುವಂತೆಯೇ ಅದು ಅನಾಗರಿಕ ಹಾಗೂ ಅರೆ-ಅನಾಗರಿಕ ದೇಶಗಳು ನಾಗರಿಕ ದೇಶಗಳ ಮೇಲೆ, ರೈತ ದೇಶಗಳು ಬೂರ್ಜ್ವಾ ದೇಶಗಳ ಮೇಲೆ, ಪೌರ್ವಾತ್ಯರು ಪಾಶ್ಚಿಮಾತ್ಯರ ಮೇಲೆ ಅವಲಂಬಿಸಿರುವಂತೆ ಮಾಡಿದೆ.

ಬೂರ್ಜ್ವಾ ವರ್ಗವು ಜನಗಳು, ಉತ್ಪಾದನಾ ಸಾಧನಗಳು ಮತ್ತು ಸೊತ್ತುಗಳು ಅಲ್ಲಲ್ಲಿ ಹಂಚಿಹೋಗಿರುವ ಪರಿಸ್ಥಿತಿಯನ್ನು ಹೆಚ್ಚು ಹೆಚ್ಚಾಗಿ ಇಲ್ಲವಾಗಿಸುತ್ತಾ ಹೋಗುತ್ತದೆ.

ಅದು ಜನಸಂಖ್ಯೆಯನ್ನು ಒಂದೇ ಕಡೆ ರಾಶಿ ಹಾಕಿದೆ, ಉತ್ಪಾದನಾ ಸಾಧನಗಳನ್ನು ಕೇಂದ್ರೀಕರಿಸಿದೆ ಮತ್ತು ಆಸ್ತಿಯನ್ನು ಕೆಲವೇ ವ್ಯಕ್ತಿಗಳ ಕೈಯಲ್ಲಿ ಏಕತ್ರಗೊಳಿಸಿದೆ. ಇದರ ಅನಿವಾರ್ಯ ಪರಿಣಾಮವೆಂದರೆ ರಾಜಕೀಯ ಕೇಂದ್ರೀಕರಣ. ಸ್ವತಂತ್ರವಾದ, ಇಲ್ಲವೇ ಸಡಿಲವಾದ ಸಂಬಂಧ ಹೊಂದಿದ್ದ, ಪ್ರತ್ಯೇಕ ಹಿತಾಸಕ್ತಿಗಳು, ಕಾನೂನುಗಳು, ಸರ್ಕಾರಗಳು ಮತ್ತು ತೆರಿಗೆ ಪದ್ಧತಿಗಳನ್ನು ಹೊಂದಿದ್ದ ಪ್ರಾಂತಗಳನ್ನೆಲ್ಲ ಕೂಡಹಾಕಿ, ಒಂದೇ ಸರ್ಕಾರ, ಒಂದೇ ಕಾನೂನು ಸಂಹಿತೆ, ಒಂದೇ ರಾಷ್ಟ್ರೀಯ ವರ್ಗಹಿತ, ಒಂದೇ ಗಡಿ ಹಾಗೂ ಒಂದೇ ಸುಂಕದರಗಳಿರುವ ಒಂದೇ ರಾಷ್ಟ್ರವಾಗಿ ಮಾಡಿದೆ.

ಬೂರ್ಜ್ವಾ ವರ್ಗ, ಒಂದು ನೂರು ವರ್ಷಗಳೂ ಆಗಿರದ ತನ್ನ ಆಳ್ವಿಕೆಯಲ್ಲಿ ಈ ಮೊದಲಿನ ಎಲ್ಲ ಪೀಳಿಗೆಗಳೂ ಒಟ್ಟಾಗಿ ನಿರ್ಮಿಸಿದುದಕ್ಕಿಂತ ಹೆಚ್ಚು ಬೃಹತ್ತಾದ, ಹೆಚ್ಚು ಪ್ರಚಂಡವಾದ ಉತ್ಪಾದಕ ಶಕ್ತಿಗಳನ್ನು ಸೃಜಿಸಿದೆ. ಮಾನವನಿಗೆ ಅಧೀನವಾದ ನೈಸರ್ಗಿಕ ಶಕ್ತಿಗಳು, ಯಂತ್ರೋಪಕರಣಗಳು, ಕೃಷಿ ಮತ್ತು ಕೈಗಾರಿಕೆಗಳಿಗೆ ರಸಾಯನಶಾಸ್ತ್ರದ ಅನ್ವಯ, ಉಗಿ-ಯಾನ, ರೈಲು ಮಾರ್ಗಗಳು, ವಿದ್ಯುತ್ ಟೆಲಿಗ್ರಾಫ್‌ಗಳು, ಭೂಭಾಗಗಳನ್ನೇ ಇಡಿಯಾಗಿ ಬೇಸಾಯಕ್ಕಾಗಿ ಅನುಗೊಳಿಸಿದುದು, ನದಿಗಳ ಕಾಲುವೆಕರಣ, ಇಡಿಯಿಡೀ ಜನಸಮುದಾಯಗಳನ್ನೇ ಇಂದ್ರಜಾಲದಿಂದೆಂಬಂತೆ ನೆಲದೊಳಗಿಂದ ಸೃಷ್ಟಿಸಿದ್ದು-ಸಾಮಾಜಿಕ ಶ್ರಮದ ಮಡಿಲಲ್ಲಿ ಇಂಥ ಉತ್ಪಾದಕ ಶಕ್ತಿಗಳು ಸುಪ್ತಾವಸ್ಥೆಯಲ್ಲಿದ್ದವೆಂಬ ಪೂರ್ವ-ಇಂಗಿತವಾದರೂ ಹಿಂದಿನ ಶತಮಾನಗಳಿಗೆ ಇತ್ತೇ?

ಹೀಗೆ, ಬೂರ್ಜ್ವಾ ವರ್ಗ ಯಾವ ಅಡಿಪಾಯದ ಮೇಲೆ ತನಗಾಗಿ ಉತ್ಪಾದನಾ ಹಾಗೂ ವಿನಿಮಯ ಸಾಧನಗಳನ್ನು ಕಟ್ಟಿ ಬೆಳೆಸಿತೋ, ಅವುಗಳು ಉದ್ಭವಗೊಂಡದ್ದು ಪಾಳೆಯಗಾರಿ ಸಮಾಜದಲ್ಲಿ ಎಂಬುದನ್ನು ಕಾಣುತ್ತೇವೆ. ಈ ಉತ್ಪಾದನಾ ಹಾಗೂ ವಿನಿಮಯ ಸಾಧನಗಳ ಬೆಳವಣಿಗೆಯ ಒಂದು ನಿರ್ದಿಷ್ಟ ಘಟ್ಟದಲ್ಲಿ, ಪಾಳೆಯಗಾರಿ ಸಮಾಜವು ಉತ್ಪಾದಿಸಿ ವಿನಿಮಯ ಮಾಡುತ್ತಿದ್ದ ಪರಿಸ್ಥಿತಿಗಳು, ಕೃಷಿ ಹಾಗೂ ಕೈಗಾರಿಕೋದ್ಯಮದ ಪಾಳೆಯಗಾರೀ ಸಂಘಟನೆ, ಒಂದು ಮಾತಿನಲ್ಲಿ ಹೇಳುವುದಾದರೆ, ಪಾಳೆಯಗಾರೀ ಆಸ್ತಿ ಸಂಬಂಧಗಳು, ಅದಾಗಲೇ ಅಭಿವೃದ್ಧಿಗೊಂಡಿದ್ದ ಉತ್ಪಾದಕ ಶಕ್ತಿಗಳೊಂದಿಗೆ ಎಷ್ಟು ಮಾತ್ರವೂ ಸರಿಹೊಂದದಾದವು;' ಅವೆಲ್ಲ ನಾನಾ ಸಂಕೋಲೆಗಳಾದವು ಅವನ್ನು ಮುರಿದೆಸೆಯಲೇ ಬೇಕಾಗಿತ್ತು; ಅವನ್ನು ಮುರಿದೆಸೆಯಲಾಯಿತು.

ಅವುಗಳ ಸ್ಥಾನದಲ್ಲಿ ಮುಕ್ತ ಸ್ಪರ್ಧೆ ಕಾಲಿಟ್ಟಿತು, ಅದರೊಂದಿಗೆ ಅದಕ್ಕನುಗುವಾದ ಸಾಮಾಜಿಕ ಹಾಗೂ ರಾಜಕೀಯ ವ್ಯವಸ್ಥೆ, ಬೂರ್ಜ್ವಾ ವರ್ಗದ ಆರ್ಥಿಕ ಹಾಗೂ ರಾಜಕೀಯ ಅಧಿಪತ್ಯವೂ, ಬಂದವು.

ಇಂತಹ ಒಂದು ಚಲನೆ ನಮ್ಮ ಕಣ್ಣ ಮುಂದೆಯೇ ಜರುಗುತ್ತಿದೆ. ತನ್ನದೇ ಉತ್ಪಾದನಾ, ವಿನಿಮಯ ಹಾಗೂ ಆಸ್ತಿ ಸಂಬಂಧಗಳಿರುವ ಆಧುನಿಕ ಬೂರ್ಜ್ವಾ ಸಮಾಜವು, ಇಂತಹ ದೈತ್ಯ ಪ್ರಮಾಣದ ಉತ್ಪಾದನಾ ಸಾಧನಗಳನ್ನು, ವಿನಿಮಯ ಸಾಧನಗಳ

ಅದ್ಭುತ ಸೃಷ್ಟಿಗೈದಿರುವ ಸಮಾಜವು, ತನ್ನ ಮಾಟ ಶಕ್ತಿಯಿಂದ ಪಾತಾಳದಿಂದ ಹೊರತಂದ ಶಕ್ತಿಗಳನ್ನು ಈಗ ತನ್ನ ಹತೋಟಿಯಲ್ಲಿರಿಸಿಕೊಳ್ಳಲು ಅಸಮರ್ಥನಾದ ಒಬ್ಬ ಮಾಟಗಾರನಂತಿದೆ. ಏಕೆಂದರೆ, ಅನೇಕ ಗತ ದಶಕಗಳ ಕೈಗಾರಿಕೆ ಹಾಗೂ ವಾಣಿಜ್ಯದ ಇತಿಹಾಸವು, ಆಧುನಿಕ ಉತ್ಪಾದನಾ ಸಂಬಂಧಗಳ ವಿರುದ್ಧ, ಬೂರ್ಜ್ವಾ ವರ್ಗ ಮತ್ತು ಅದರ ಆಳ್ವಿಕೆಯ ಅಸ್ತಿತ್ವದ ಶರತ್ತುಗಳಾದ ಆಸ್ತಿ ಸಂಬಂಧಗಳ ವಿರುದ್ಧ, ಆಧುನಿಕ ಉತ್ಪಾದಕ ಶಕ್ತಿಗಳ ಬಂಡಾಯದ ಇತಿಹಾಸವೇ ಆಗಿದೆ. ಇಲ್ಲಿ ಕಾಲ–ಕಾಲಕ್ಕೆ ಮರಳುವ, ಪ್ರತಿ ಬಾರಿಯೂ ಹೆಚ್ಚೆಚ್ಚು ಬೆದರಿಕೆಗಳನ್ನೊಡ್ಡುತ್ತಾ ಇಡೀ ಬೂರ್ಜ್ವಾ ಸಮಾಜದ ಅಸ್ತಿತ್ವವನ್ನೇ ಪರೀಕ್ಷೆಗೊಳಪಡಿಸುವ ವಾಣಿಜ್ಯ ಬಿಕ್ಕಟ್ಟುಗಳನ್ನು ಪ್ರಸ್ತಾಪ ಮಾಡಿದರಷ್ಟೇ ಸಾಕು. ಈ ಬಿಕ್ಕಟ್ಟುಗಳಲ್ಲಿ ಈಗ ತಯಾರಿಸಿರುವ ಉತ್ಪನ್ನಗಳ ಹೆಚ್ಚಿನ ಭಾಗವಷ್ಟೆ ಅಲ್ಲ, ಹಿಂದೆ ಸೃಜಿಸಲಾದ ಉತ್ಪಾದಕ ಶಕ್ತಿಗಳ ಬಹುಭಾಗ ಕೂಡ ಕಾಲ–ಕಾಲಕ್ಕೆ ನಾಶಗೊಳ್ಳುತ್ತಿವೆ. ಈ ಬಿಕ್ಕಟ್ಟುಗಳ ಸಮಯದಲ್ಲಿ ಒಂದು ಸಾಂಕ್ರಾಮಿಕ ರೋಗ[10], ಈ ಮುನ್ನಿನ ಎಲ್ಲ ಕಾಲಘಟ್ಟಗಳಲ್ಲೂ ಅಸಂಬದ್ಧವೆಂದು ಕಾಣಿಸಬಹುದಾದ ಅತ್ಯುತ್ಪಾದನೆಯ ಸಾಂಕ್ರಾಮಿಕ ರೋಗ ಹರಡತೊಡಗುತ್ತದೆ. ಸಮಾಜವು ಇದ್ದಕ್ಕಿದ್ದಂತೆ ಕ್ಷಣಿಕ ಅನಾಗರಿಕ ಸ್ಥಿತಿಗೆ ಹಿಂದಿರುಗಿದಂತೆ ಕಾಣುತ್ತದೆ; ಒಂದು ಕ್ಷಾಮವೋ ಧ್ವಂಸಕಾರಿ ಸಾರ್ವತ್ರಿಕ ಯುದ್ಧವೋ ಪ್ರತಿಯೊಂದು ಜೀವಿಕೆಯ ಸಾಧನದ ಪೂರೈಕೆಯನ್ನು ಕಡಿದು ಹಾಕಿದಂತೆ ತೋರಿಬರುತ್ತದೆ; ಉದ್ದಿಮೆ ಹಾಗೂ ವಾಣಿಜ್ಯ ನಾಶಗೊಂಡಂತೆ ಕಾಣಬರುತ್ತದೆ; ಏತಕ್ಕಾಗಿ? ಏಕೆಂದರೆ ಅತಿಯಾದ ನಾಗರೀಕತೆ, ಅತಿಯಾದ ಜೀವಿಕೆಯ ಸಾಧನಗಳು, ಅತಿಯಾದ ಉದ್ದಿಮೆ, ಅತಿಯಾದ ವಾಣಿಜ್ಯದಿಂದಾಗಿ. ಸಮಾಜದ ವಶದಲ್ಲಿರುವ ಉತ್ಪಾದಕ ಶಕ್ತಿಗಳು ಆನಂತರ ಬೂರ್ಜ್ವಾ ಆಸ್ತಿಗಳ[11] ಪರಿಸ್ಥಿತಿಗಳ ಅಭಿವೃದ್ಧಿಗೆ ಉತ್ತೇಜನೆ ನೀಡುವ ಪ್ರವೃತ್ತಿಯನ್ನು ಎಳ್ಳಷ್ಟೂ ತೋರಿಸದಂತಾಗುತ್ತದೆ; ತದ್ವಿರುದ್ಧವಾಗಿ ಅವು ತಮಗೆ ಬೇಡಿ ತೊಡಿಸಿರುವಂಥ ಈ ಪರಿಸ್ಥಿತಿಗಳನ್ನು ಮೀರಿ ನಿಲ್ಲುವಷ್ಟು ಶಕ್ತಿಯುತವಾಗುತ್ತವೆ. ಅವು ಈ ಬೇಡಿಗಳಿಂದ ಬಿಡಿಸಿಕೊಂಡ ಕೂಡಲೇ ಇಡೀ ಬೂರ್ಜ್ವಾ ಸಮಾಜದಲ್ಲಿ ಅವ್ಯವಸ್ಥೆಯನ್ನು ಉಂಟು ಮಾಡುತ್ತವೆ, ಬೂರ್ಜ್ವಾ ಆಸ್ತಿಯ ಅಸ್ತಿತ್ವಕ್ಕೆ ಅಪಾಯ ತರುತ್ತವೆ. ಬೂರ್ಜ್ವಾ ಸಮಾಜದ ಸ್ಥಿತಿಗಳು ಅವು ನಿರ್ಮಿಸಿದ ಸಂಪತ್ತನ್ನು ಒಳಗೊಳ್ಳಲಾರದಷ್ಟು ಸಂಕುಚಿತವಾಗಿರುತ್ತವೆ. ಬೂರ್ಜ್ವಾ ವರ್ಗ ಈ ಬಿಕ್ಕಟ್ಟುಗಳನ್ನೂ ಹೇಗೆ ಮೀರಿ ನಿಲ್ಲುತ್ತದೆ? ಒಂದು ಕಡೆ, ಉತ್ಪಾದಕ ಶಕ್ತಿಗಳ ಸಮೂಹವನ್ನು ಬಲಾತ್ಕಾರವಾಗಿ ನಾಶಗೊಳಿಸುವುದರಿಂದ, ಮತ್ತೊಂದು ಕಡೆ ಹೊಸ ಮಾರುಕಟ್ಟೆಗಳನ್ನು ಗಳಿಸುವುದರಿಂದ ಮತ್ತು ಹಳೆಯವನ್ನು ಹೆಚ್ಚು ಆಮೂಲಾಗ್ರವಾಗಿ ಶೋಷಿಸುವುದರಿಂದ. ಅಂದರೆ ಹೆಚ್ಚು ವಿಸ್ತೃತವಾದ, ಹೆಚ್ಚು ವಿನಾಶಕಾರಿಯಾದ ಬಿಕ್ಕಟ್ಟುಗಳಿಗೆ ದಾರಿ ಮಾಡಿಕೊಡುವ ಮೂಲಕ ಮತ್ತು ಬಿಕ್ಕಟ್ಟುಗಳನ್ನು ತಪ್ಪಿಸುವಂಥ ಸಾಧನಗಳನ್ನು ಕುಂದಿಸುವ ಮೂಲಕ.

ಯಾವ ಆಯುಧಗಳಿಂದ ಬೂರ್ಜ್ವಾ ವರ್ಗವು ಪಾಳೆಯಗಾರಿಯನ್ನು ಕೆಳಗುರುಳಿಸಿತೋ, ಅವೇ ಆಯುಧಗಳನ್ನು ಈಗ ಬೂರ್ಜ್ವಾ ವರ್ಗದ ವಿರುದ್ಧವೇ ತಿರುಗಿಸಲಾಗಿದೆ.



ಗೆಲ್ಲಲೊಂದು

ಬೂರ್ಜ್ವಾ ವರ್ಗ ತನಗೆ ಸಾವು ತರುವ ಆಯುಧಗಳನ್ನು ತಾನೇ ರೂಪಿಸಿದೆಯೆಷ್ಟೆ ಅಲ್ಲ, ಈ ಆಯುಧಗಳನ್ನು ಬಳಸುವ ಜನರನ್ನು–ಆಧುನಿಕ ಕಾರ್ಮಿಕ ವರ್ಗವನ್ನು–ಶ್ರಮಜೀವಿಗಳನ್ನು[12] ಸಹ ಅಸ್ತಿತ್ವಕ್ಕೆ ತಂದಿದೆ.

ಬೂರ್ಜ್ವಾ ವರ್ಗ, ಅಂದರೆ ಬಂಡವಾಳ, ಯಾವ ಪ್ರಮಾಣದಲ್ಲಿ ಬೆಳೆಯುತ್ತದೆಯೋ ಅದೇ ಪ್ರಮಾಣದಲ್ಲಿ ಶ್ರಮಜೀವಿ ವರ್ಗವೂ, ಅಂದರೆ ಆಧುನಿಕ ಕಾರ್ಮಿಕ ವರ್ಗವೂ ಬೆಳೆಯುತ್ತದೆ–ಇದು ಎಲ್ಲಿಯ ವರೆಗೆ ತಮ್ಮ ಶ್ರಮ ಬಂಡವಾಳ ಹೆಚ್ಚಿಸುತ್ತದೆಯೋ ಅಲ್ಲಿಯ ವರೆಗಷ್ಟೇ ಕೆಲಸ ಪಡೆಯಬಲ್ಲ, ಮತ್ತು ಕೆಲಸ ಪಡೆಯುತ್ತಿರುವ ವರೆಗೆ ಮಾತ್ರ ಬದುಕಿರಬಲ್ಲ, ಶ್ರಮಿಕರ ಒಂದು ವರ್ಗ. ತಮ್ಮನ್ನು ಖಂಡ–ಖಂಡವಾಗಿ ಮಾರಿಕೊಳ್ಳಲೇ ಬೇಕಾದ ಈ ಶ್ರಮಿಕರು, ಬೇರೆಲ್ಲ ವಾಣಿಜ್ಯದ ಸಾಮಗ್ರಿಗಳಂತೆ, ಒಂದು ಸರಕು. ಹಾಗಾಗಿ ಇವರೂ ಸಹ ಪೈಪೋಟಿಯ ಎಲ್ಲ ಏರುಪೇರುಗಳಿಗೂ, ಮಾರುಕಟ್ಟೆಯ ಎಲ್ಲ ಏರಿಳಿತಗಳಿಗೂ ಗುರಿಯಾಗಿರುತ್ತಾರೆ.

ಯಂತ್ರಗಳ ವಿಸ್ತೃತ ಬಳಕೆಯ ಹಾಗೂ ಶ್ರಮವಿಭಜನೆಯ ಫಲವಾಗಿ ಶ್ರಮಜೀವಿಗಳ ಕೆಲಸವು ಸ್ವಂತಿಕೆಯ ಎಲ್ಲ ಸ್ವರೂಪವನ್ನೂ ಕಳೆದುಕೊಂಡಿದೆ, ಮತ್ತು ಅದರ ಪರಿಣಾಮವಾಗಿ ಕೆಲಸಗಾರನಿಗೆ ಅದರ ಬಗೆಗಿದ್ದ ಎಲ್ಲ ಆಕರ್ಷಣೆಯೂ  ಕಳೆದುಹೋಗಿದೆ. ಅವನು ಯಂತ್ರಕ್ಕೊಂದು ಬಾಲಂಗೋಚಿಯಾಗುತ್ತಾನೆ, ತೀರ ಸರಳವಾದ, ತೀರ ಬೇಸರ ಹಿಡಿಸುವ ಮತ್ತು ತೀರ ಸುಲಭವಾಗಿ ಪಡೆದ ಕೌಶಲ ಮಾತ್ರವೇ ಆತನಿಂದ ಬೇಕಾಗುತ್ತದೆ. ಆದ್ದರಿಂದ ಒಬ್ಬ ಕೆಲಸಗಾರನನ್ನು ಉತ್ಪಾದಿಸುವ ಖರ್ಚು ಆತನಿಗೆ ತಾನು ಬದುಕುಳಿಯಲು ಮತ್ತು ತನ್ನ ಸಂತಾನಾಭಿವೃದ್ಧಿಗೆ ಸಾಲುವಷ್ಟಕ್ಕೇ ಸಂಪೂರ್ಣವಾಗಿ ಸೀಮಿತವಾಗಿರುತ್ತದೆ. ಆದರೆ ಒಂದು ಸರಕಿನ ಬೆಲೆ, ಅದರಿಂದಾಗಿ ಶ್ರಮದ ಬೆಲೆ ಕೂಡ, ಅದರ ಉತ್ಪಾದನಾ ವೆಚ್ಚಕ್ಕೆ ಸಮನಾಗಿರುತ್ತದೆ. ಆದ್ದರಿಂದ ಕೆಲಸದ ಬಗೆಗೆ ವಿಕರ್ಷಣೆ ಹೆಚ್ಚಿದಂತೆ ಅಷ್ಟೇ ಪ್ರಮಾಣದಲ್ಲಿ ಕೂಲಿಯೂ ಕಮ್ಮಿಯಾಗುತ್ತಾ ಹೋಗುತ್ತದೆ. ಅಷ್ಟೇ ಅಲ್ಲ, ಯಂತ್ರದ ಬಳಕೆ ಹಾಗೂ ಶ್ರಮವಿಭಜನೆ ಹೆಚ್ಚಿದಂತೆ, ಅದೇ ಪ್ರಮಾಣದಲ್ಲಿ ಬೆವರಿನ ದುಡಿಮೆಯ ಹೊರೆಯೂ[13], ಕೆಲಸದ  ಗಂಟೆಗಳನ್ನು ಹೆಚ್ಚಿಸುವುದರ ಮೂಲಕವಾಗಲೀ, ಇಲ್ಲವೇ ಒಂದು ನಿರ್ದಿಷ್ಟ ಕಾಲಾವಧಿಯಲ್ಲೇ ಹೆಚ್ಚು ಹೆಚ್ಚು ಪ್ರಮಾಣದ ಕೆಲಸ ಪಡೆಯುವ ಮೂಲಕವಾಗಲೀ ಅಥವಾ ಯಂತ್ರಸಾಮಗ್ರಿಗಳ ಕಾರ್ಯ ವೇಗವನ್ನು ಹೆಚ್ಚಿಸುವ ಮೂಲಕವಾಗಲೀ, ಇತರ ವಿಧಾನಗಳಲ್ಲಾಗಲೀ, ಹೆಚ್ಚುತ್ತಾ ಹೋಗುತ್ತದೆ.

ಆಧುನಿಕ ಉದ್ದಿಮೆಯು ಕುಟುಂಬದ ಹಿರಿಯನಂತಿರುವವನ ಪುಟ್ಟ ಕಾರ್ಯಾಗಾರವನ್ನು ಔದ್ಯಮಿಕ ಬಂಡವಾಳಗಾರನ ಮಹಾ ಕಾರ್ಖಾನೆಯನ್ನಾಗಿ ಪರಿವರ್ತಿಸಿದೆ. ಕಾರ್ಖಾನೆಯೊಳಗೆ ತುಂಬಲಾದ ಕೂಲಿಕಾರ ಸಮೂಹಗಳನ್ನು ಸೈನಿಕರಂತೆ ಸಂಘಟಿಸಲಾಗಿರುತ್ತದೆ. ಔದ್ಯಮಿಕ ಸೈನ್ಯದ ಈ ಸಿಪಾಯಿಗಳನ್ನು ಅಧಿಕಾರಿಗಳ ಹಾಗೂ ಸಾರ್ಜಂಟರುಗಳ ಒಂದು ಸುವ್ಯವಸ್ಥಿತ ಶ್ರೇಣಿಯ ಅಧಿಪತ್ಯಕ್ಕೆ ಒಳಪಡಿಸಲಾಗಿರುತ್ತದೆ. ಅವರು ಬೂರ್ಜ್ವಾ ವರ್ಗದ, ಹಾಗೂ ಬೂರ್ಜ್ವಾ ಪ್ರಭುತ್ವದ ಗುಲಾಮರಷ್ಟೆ ಅಲ್ಲ, ಪ್ರತಿದಿನವೂ ಪ್ರತಿ ಗಂಟೆಯೂ ಯಂತ್ರದ, ಮೇಲ್ವಿಚಾರಕನ ಮತ್ತು ಎಲ್ಲಕ್ಕೂ ಮಿಗಿಲಾಗಿ

ವೈಯಕ್ತಿಕ ಬೂರ್ಜ್ವಾ ತಯಾರಿಕೆಗಾರನ ದಾಸ್ಯಕ್ಕೆ ಒಳಗಾಗುತ್ತಾರೆ. ಗಳಿಕೆಯೇ ತನ್ನ ಗುರಿ ಮತ್ತು ಉದ್ದೇಶ ಎಂದು ಈ ನಿರಂಕುಶ ವ್ಯವಸ್ಥೆಯು ಎಷ್ಟು ಹೆಚ್ಚು ಬಹಿರಂಗವಾಗಿ ಘೋಷಿಸುತ್ತದೋ, ಅದು ಅಷ್ಟೇ ಹೆಚ್ಚು ತುಚ್ಛವೂ, ದ್ವೇಷಪೂರ್ಣವೂ ಹಾಗೂ ಮನಗೆಡಿಸುವಂತದ್ದೂ ಆಗುತ್ತದೆ.

ದೈಹಿಕ ಶ್ರಮದ ಸೂಚಕವಾದ ಕುಶಲತೆ ಹಾಗೂ ಪರಿಶ್ರಮ ಕಡಿಮೆಯಾದಷ್ಟೂ, ಅಂದರೆ ಆಧುನಿಕ ಉದ್ದಿಮೆಯು ಹೆಚ್ಚು ಅಭಿವೃದ್ಧಿಗೊಂಡಷ್ಟೂ, ಪುರುಷರ ದುಡಿಮೆಯನ್ನು ಮಹಿಳೆಯರ[14] ದುಡಿಮೆಯು ಹೆಚ್ಚು ಹೆಚ್ಚಾಗಿ ಬದಿಗೆ ತಳ್ಳುತ್ತದೆ. ಕಾರ್ಮಿಕ ವರ್ಗಕ್ಕೆ ವಯಸ್ಸಿನ ಅಥವಾ ಲಿಂಗದ ವ್ಯತ್ಯಾಸಗಳು ಈಗ ಯಾವುದೇ ವಿಶಿಷ್ಟ ಸಾಮಾಜಿಕ ಸಿಂಧುತ್ವವನ್ನು ಹೊಂದಿಲ್ಲ. ಇವರು ಎಲ್ಲರೂ ದುಡಿಮೆಯ ಸಲಕರಣೆಗಳೇ, ಇವರ ವಯಸ್ಸು ಹಾಗೂ ಲಿಂಗಕ್ಕೆ ತಕ್ಕಂತೆ ಹೆಚ್ಚು ಅಥವ ಕಡಿಮೆ ಖರ್ಚಿನ ಸಲಕರಣೆಗಳು.

ತಯಾರಿಕೆದಾರನಿಂದ ದುಡಿಮೆಗಾರನ ಶೋಷಣೆಯು, ಇದುವರೆಗೆ ಒಂದು ಕೊನೆಯಲ್ಲಿದ್ದು, ಆತ ನಗದು ರೂಪದಲ್ಲಿ ತನ್ನ ಕೂಲಿಯನ್ನು ಪಡೆಯುತ್ತಿರುವಂತೆಯೇ, ಬೂರ್ಜ್ವಾ ವರ್ಗದ ಇತರ ವಿಭಾಗಗಳು–ಭೂಸ್ವಾಮಿ, ಅಂಗಡಿದಾರ, ಗಿರವಿದಾರ ಇವರೇ ಮೊದಲಾದವರು–ಆತನ ಮೇಲೆ ಮುಗಿಬೀಳುತ್ತಾರೆ.

ಮಧ್ಯಮ ವರ್ಗದ ಕೆಳಗಿನ ಸ್ತರದವರು[15]–ಸಣ್ಣ ವ್ಯಾಪಾರೀ ಜನಗಳು, ಪುಟ್ಟ ಅಂಗಡಿದಾರರು ಮತ್ತು ಸಾಮಾನ್ಯವಾಗಿ ನಿವೃತ್ತ ವ್ಯಾಪಾರಿಗಳು[16], ಕೈಕಸಬುದಾರರು ಹಾಗೂ ರೈತರು–ಇವರೆಲ್ಲರೂ, ಭಾಗಶಃ ತಮ್ಮ ಪುಟ್ಟ ಪ್ರಮಾಣದ ಬಂಡವಾಳ ಆಧುನಿಕ ಉದ್ದಿಮೆಯು ಪ್ರಮಾಣಕ್ಕೆ ಸಾಲದೆ ಹೋಗುವುದರಿಂದ ಮತ್ತು ದೊಡ್ಡ ಬಂಡವಾಳಗಾರರೊಂದಿಗೆ ಸ್ಪರ್ಧೆಯಲ್ಲಿ ಮುಳುಗಿಹೋಗುವುದರಿಂದ, ಭಾಗಶಃ ಉತ್ಪಾದನೆಯು ಹೊಸ ವಿಧಾನಗಳಿಂದಾಗಿ ಇವರ ವಿಶಿಷ್ಟ ಕೌಶಲಕ್ಕೆ ಬೆಲೆಯಿಲ್ಲದಂತಾಗುವುದರಿಂದ ಕ್ರಮೇಣ ಶ್ರಮಜೀವಿಗಳ ಮಟ್ಟಕ್ಕೆ ಕುಸಿಯುತ್ತಾರೆ. ಹೀಗೆ ಶ್ರಮಜೀವಿ ವರ್ಗಕ್ಕೆ ಜನಗಳು ಎಲ್ಲ ವರ್ಗಗಳಿಂದಲೂ ಬಂದು ಸೇರುತ್ತಾರೆ.

ಶ್ರಮಜೀವಿ ವರ್ಗ ಬೆಳವಣಿಗೆಯ ನಾನಾ ಘಟ್ಟಗಳ ಮೂಲಕ ಹಾದುಬರುತ್ತದೆ. ಅದರ ಹುಟ್ಟಿನೊಂದಿಗೆ ಬೂರ್ಜ್ವಾ ವರ್ಗದ ವಿರುದ್ಧ ಅದರ ಹೋರಾಟ ಪ್ರಾರಂಭವಾಗುತ್ತದೆ. ಮೊದಮೊದಲಿಗೆ ದುಡಿಮೆಗಾರರು ವೈಯಕ್ತಿಕವಾಗಿ ಸೆಣಸುತ್ತಾರೆ. ಅನಂತರ ಒಂದು ಕಾರ್ಖಾನೆಯ ಇಡೀ ದುಡಿಮೆಗಾರರು ಹೋರಾಟ ನಡೆಸುತ್ತಾರೆ. ಆಮೇಲೆ ಒಂದು ಪ್ರದೇಶದಲ್ಲಿ ಒಂದು ವೃತ್ತಿಗೆ ಸೇರಿದ ಕಾರ್ಮಿಕರಿಂದ ಅವರನ್ನು ನೇರವಾಗಿ ಶೋಷಿಸುವ ಒಬ್ಬ ಬೂರ್ಜ್ವಾ ವ್ಯಕ್ತಿಯ ವಿರುದ್ಧ ಹೋರಾಟ ನಡೆಯುತ್ತದೆ. ಅವರು ತಮ್ಮ ದಾಳಿಯನ್ನು ಬೂರ್ಜ್ವಾ ಉತ್ಪಾದನಾ ಪರಿಸ್ಥಿತಿಗಳ ವಿರುದ್ಧವಲ್ಲ, ಉತ್ಪಾದನಾ ಸಲಕರಣೆಗಳ ವಿರುದ್ಧವೇ ಹರಿಬಿಡುತ್ತಾರೆ[17]; ಅವರು ತಮ್ಮ ಶ್ರಮದೊಂದಿಗೆ ಸ್ಪರ್ಧೆ ನಡೆಸುವ ಆಮದಾದ ಸಾಮಾನುಗಳನ್ನು ನಾಶಪಡಿಸುತ್ತಾರೆ, ಯಂತ್ರಗಳನ್ನು ಕುಟ್ಟಿ

[illegible] ಮಾಡುತ್ತಾರೆ. ಕಾರ್ಖಾನೆಗಳಿಗೆ ಬೆಂಕಿ ಹಚ್ಚುತ್ತಾರೆ, ಮಧ್ಯಯುಗದ ಕೆಲಸಗಾರನ [illegible]ವಾದ ಸ್ಥಾನಮಾನವನ್ನು ಬಲವಂತದಿಂದ ಪುನಃ ಸ್ಥಾಪಿಸಲು ಹವಣಿಸುತ್ತಾರೆ. ಈ ಘಟ್ಟದಲ್ಲಿ ದುಡಿಮೆಗಾರರು ಇನ್ನೂ ಇಡೀ ದೇಶದಾದ್ಯಂತ ಹರಡಿಹೋದ, ಪರಸ್ಪರ ಸ್ಪರ್ಧೆಯಿಂದ ಮುರಿದಿರುವ ಅಸಂಗತವಾಗಿರುವ[18] ಸಮೂಹವಷ್ಟೇ ಆಗಿರುತ್ತಾರೆ. ಎಲ್ಲಾದರೂ ಅವರು ಹೆಚ್ಚು ಘನವಾದ ಸಂಸ್ಥೆಯನ್ನು ನಿರ್ಮಿಸಲು ಒಂದುಗೂಡಿದ್ದಲ್ಲಿ ಅದು ಇನ್ನೂ ತಮ್ಮ ಸ್ವಂತ ಸಕ್ರಿಯವಾಗಿ ಒಂದಾಗಿರುವುದರ ಪರಿಣಾಮವಾಗಿಯೇನೂ ಅಲ್ಲ. ಆದರೆ ಬೂರ್ಜ್ವಾ ವರ್ಗ ಒಂದಾಗಿರುವುದರ ಪರಿಣಾಮವಾಗಿರುತ್ತದೆ. ಈ ವರ್ಗವು ತನ್ನ ಸ್ವಂತ ರಾಜಕೀಯ ಗುರಿ.ಸಾಧನೆಗಾಗಿ ಇಡೀ ಶ್ರಮಜೀವಿ ವರ್ಗವನ್ನು ಕ್ರಿಯೆಗಿಳಿಯುವಂತೆ ಮಾಡಲೇಬೇಕಾಗುತ್ತದೆ. ಅಲ್ಲದೆಇನ್ನೂ ಕೆಲಕಾಲದ ವರೆಗೆ ಹಾಗೆ ಮಾಡಲು ಶಕ್ತವಾಗಿರುತ್ತದೆ. ಆದ್ದರಿಂದ ಆ ಘಟ್ಟದಲ್ಲಿ ಶ್ರಮಜೀವಿಗಳು ತಮ್ಮ ಶತ್ರುಗಳ ವಿರುದ್ಧ ಹೋರಾಡುವುದಿಲ್ಲ, ಆದರೆ ತಮ್ಮ ಶತ್ರುವಿನ ಶತ್ರುವಿನ ವಿರುದ್ಧ, ಅಂದರೆ ನಿರಂಕುಶ ರಾಜಪ್ರಭುತ್ವದ ಉಳಿಕೆಗಳು, ಭೂಮಾಲಿಕರು, ಉದ್ದಿಮೆಗಳಿಗೆ ಸಂಬಂಧಿಸಿರದ ಬೂರ್ಜ್ವಾಗಳು, ಪುಟ್ಟ ಬೂರ್ಜ್ವಾಗಳು ಇವರ ವಿರುದ್ಧ ಹೋರಾಟ ನಡೆಸುತ್ತಾರೆ. ಹೀಗೆ ಇಡೀ ಐತಿಹಾಸಿಕ ಚಳವಳಿಯು ಬೂರ್ಜ್ವಾ ವರ್ಗದ ಕೈಗಳಲ್ಲೇ ಕೇಂದ್ರೀಕೃತವಾಗಿರುತ್ತದೆ; ಹಾಗೆ ಗಳಿಸಿದ ಪ್ರತಿಯೊಂದು ವಿಜಯವೂ ಬೂರ್ಜ್ವಾಗಳ ವಿಜಯವೇ ಆಗಿರುತ್ತದೆ.

ಆದರೆ ಉದ್ದಿಮೆಯ ಬೆಳವಣಿಗೆಯೊಂದಿಗೆ ಶ್ರಮಜೀವಿ ವರ್ಗವು ಸಂಖ್ಯೆಯಲ್ಲಿ ಹೆಚ್ಚುವುದಷ್ಟೇ ಅಲ್ಲ, ಹೆಚ್ಚೆಚ್ಚು ಬೃಹತ್ ಸಮೂಹಗಳಾಗಿ ಸಾಂದ್ರಗೊಳ್ಳತೊಡಗುತ್ತದೆ, ಅದರ ಶಕ್ತಿ ಬೆಳೆಯುತ್ತದೆ, ಮತ್ತು ಆ ಶಕ್ತಿ ಹೆಚ್ಚು-ಹೆಚ್ಚಾಗಿ ಅದರ ಅನುಭವಕ್ಕೆ ಬರುತ್ತದೆ. ಯಂತ್ರಸಾಮಗ್ರಿಗಳು ಎಲ್ಲ ಶ್ರಮ ವ್ಯತ್ಯಾಸಗಳನ್ನೂ ತೊಡೆದುಹಾಕಿ ಸುಮಾರಾಗಿ ಎಲ್ಲೆಲ್ಲೂ ಕೂಲಿಗಳನ್ನು ಒಂದೇ ಸಮನಾದ ಕೆಳಮಟ್ಟಕ್ಕೆ ಇಳಿಸುವ ಪ್ರಮಾಣಕ್ಕನುಗುಣವಾಗಿ, ಶ್ರಮಜೀವಿ ವರ್ಗದ ವಿವಿಧ ದರ್ಜೆಗಳೊಳಗೇ ವಿವಿಧ ಹಿತಾಸಕ್ತಿಗಳೂ ಜೀವನ ಪರಿಸ್ಥಿತಿಗಳೂ ಹೆಚ್ಚು ಹೆಚ್ಚಾಗಿ ಸಮಾನವಾಗತೊಡಗುತ್ತವೆ. ಬೂರ್ಜ್ವಾಗಳ ನಡುವೆ ಹೆಚ್ಚುವ ಸ್ಪರ್ಧೆ, ಅದರ ಫಲಿತವಾದ ವಾಣಿಜ್ಯ ಬಿಕ್ಕಟ್ಟುಗಳು ಕಾರ್ಮಿಕರ ಕೂಲಿಗಳು ಇನ್ನೂ ಹೆಚ್ಚು ಏರುಪೇರುಗೊಳ್ಳುವಂತೆ ಮಾಡುತ್ತವೆ. ಯಂತ್ರೋಪಕರಣಗಳ ಮೇಲ್ಪಾಡು ಅವಿರತವಾಗಿ, ಹೆಚ್ಚೆಚ್ಚು ತ್ವರಿತವಾಗಿ ಅಭಿವೃದ್ಧಿ ಹೊಂದುತ್ತಿರುವಂತೆ, ಅದು ಅವರ ಜೀವನೋಪಾಯವನ್ನು ಹೆಚ್ಚು ಹೆಚ್ಚಾಗಿ ಅಸ್ಥಿರಗೊಳಿಸುತ್ತದೆ; ವೈಯಕ್ತಿಕ ಮಟ್ಟದಲ್ಲಿ ಕಾರ್ಮಿಕರು ಮತ್ತು ಬೂರ್ಜ್ವಾಗಳ ನಡುವೆ ಜರುಗುವ ಘರ್ಷಣೆಯು ಹೆಚ್ಚು ಹೆಚ್ಚಾಗಿ ಎರಡು ವರ್ಗಗಳ ನಡುವಿನ ಘರ್ಷಣೆಯ ರೂಪ ಪಡೆದುಕೊಳ್ಳತೊಡಗುತ್ತದೆ. ಆಗ ಕಾರ್ಮಿಕರು ಬೂರ್ಜ್ವಾಗಳ ವಿರುದ್ಧ ಸಂಯೋಜನೆಗಳನ್ನು (ವೃತ್ತಿಗಳ ಒಕ್ಕೂಟಗಳನ್ನು)[19] ರಚಿಸತೊಡಗುತ್ತಾರೆ; ಕೂಲಿಗಳ ದರ ತಗ್ಗದಿರುವಂತೆ ಮಾಡಲೋಸುಗ ಅವರು ಒಂದುಗೂಡುತ್ತಾರೆ; ಆಗಾಗ್ಗೆ ಜರುಗುವ ಈ ಬಂಡಾಯಗಳಿಗೆ ಪೂರ್ವಭಾವಿ ವ್ಯವಸ್ಥೆ ಮಾಡಲೋಸುಗ ಅವರು ಶಾಶ್ವತ ಸಂಘಗಳನ್ನು ಸ್ಥಾಪಿಸುತ್ತಾರೆ. ಅಲ್ಲಿ-ಇಲ್ಲಿ ಈ ಕದನ ಗಲಭೆಯಾಗಿಯೂ ಪರಿಣಮಿಸುತ್ತದೆ.

ಆಗೀಗ ಕಾರ್ಮಿಕರು ಜಯಶಾಲಿಗಳಾಗುತ್ತಾರೆ, ಆದರೆ ಕೆಲಕಾಲದ ವರೆಗಷ್ಟೆ. ಅವರ ಸಮರಗಳ ನಿಜವಾದ ಫಲ ಇರುವುದು ತಕ್ಷಣದ ಫಲಿತಾಂಶದಲ್ಲಲ್ಲ, ಕಾರ್ಮಿಕರ ಸತತವಾಗಿ ವಿಸ್ತಾರವಾಗುವ ಒಗ್ಗಟ್ಟಿನಲ್ಲಿ. ಈ ಒಗ್ಗಟ್ಟಿಗೆ ಆಧುನಿಕ ಉದ್ದಿಮೆಯು ನಿರ್ಮಿಸಿರುವ ಸಂಪರ್ಕ ಸಾಧನಗಳು ಉತ್ತಮಗೊಳ್ಳುತ್ತ, ವಿಭಿನ್ನ ಪ್ರದೇಶಗಳ ಕಾರ್ಮಿಕರ ನಡುವೆ ಪರಸ್ಪರ ಸಂಪರ್ಕ ಏರ್ಪಡಿಸುವ ಮೂಲಕ ನೆರವು ನೀಡುತ್ತವೆ. ಈ ಸಂಪರ್ಕವೇ, ಅಸಂಖ್ಯ, ಒಂದೇ ಸ್ವರೂಪದ ಸ್ಥಳೀಯ ಹೋರಾಟಗಳನ್ನು ಕೇಂದ್ರೀಕರಿಸಿ ವರ್ಗಗಳ ನಡುವಿನ ಒಂದು ರಾಷ್ಟ್ರೀಯ ಹೋರಾಟವನ್ನಾಗಿ ಪರಿವರ್ತಿಸಲು ಬೇಕಾಗಿತ್ತು. ಆದರೆ ಪ್ರತಿಯೊಂದು ವರ್ಗ ಹೋರಾಟವೂ ಒಂದು ರಾಜಕೀಯ ಹೋರಾಟವೇ. ಯಾವ ಒಕ್ಕೂಟ ಸಾಧಿಸಲು ಮಧ್ಯಯುಗದ ಪಟ್ಟಣಿಗರಿಗೆ ಆಗಿನ ಹೆದ್ದಾರಿಗಳ ದುಸ್ಥಿತಿಯಿಂದಾಗಿ ಅನೇಕ ಶತಮಾನಗಳೇ ಬೇಕಾದವೋ, ಅದನ್ನು ಆಧುನಿಕ ಶ್ರಮಜೀವಿಗಳು ರೈಲು ಮಾರ್ಗಗಳಿಂದಾಗಿ ಕೆಲವೇ ವರ್ಷಗಳಲ್ಲಿ ಸಾಧಿಸುತ್ತಾರೆ.

ಈ ರೀತಿ ಶ್ರಮಜೀವಿಗಳು ಒಂದು ವರ್ಗವಾಗಿ, ತತ್ಫಲವಾಗಿ ಒಂದು ರಾಜಕೀಯ ಪಕ್ಷವಾಗಿ ಸಂಘಟಿತಗೊಳ್ಳುವುದಕ್ಕೆ ಕಾರ್ಮಿಕರ ನಡುವಿನ ಪೈಪೋಟಿಯು ನಿರಂತರವಾಗಿ ಅಡ್ಡಿ ಬರುತ್ತಿರುತ್ತದೆ. ಆದರೂ ಅದು ಮತ್ತೆ ಎದ್ದು ಬರುತ್ತದೆ, ಹೆಚ್ಚು ಶಕ್ತಿಯುತವಾಗಿ, ದೃಢತರವಾಗಿ ಹಾಗೂ ಇನ್ನಷ್ಟು ಬಲಿಷ್ಠವಾಗಿ. ಅದು ಬೂರ್ಜ್ವಾ ವರ್ಗದೊಳಗೇ ಇರುವ ಒಡಕುಗಳ ಪ್ರಯೋಜನ ಪಡೆದುಕೊಂಡು ಕಾರ್ಮಿಕರ ನಿರ್ದಿಷ್ಟ ಹಿತಗಳಿಗೆ ಶಾಸನಾತ್ಮಕ ಮನ್ನಣೆ ಸಿಗುವಂತೆ ಒತ್ತಾಯ ತರುತ್ತದೆ. ಇಂಗ್ಲೆಂಡಿನಲ್ಲಿ ಹತ್ತು ಗಂಟೆಗಳ ಮಸೂದೆ ಅಂಗೀಕೃತವಾದುದು ಹೀಗೆಯೇ.

ಒಟ್ಟಿನಲ್ಲಿ ಹಳೆಯ ಸಮಾಜದ ವರ್ಗಗಳ ನಡುವಿನ ಸಂಘರ್ಷಗಳು ಅನೇಕ ರೀತಿಗಳಲ್ಲಿ ಶ್ರಮಜೀವಿ ವರ್ಗದ ಬೆಳವಣಿಗೆಯ ದಾರಿಗೆ ಅನುಕೂಲ ಮಾಡಿಕೊಡುತ್ತವೆ. ಬೂರ್ಜ್ವಾ ವರ್ಗ ತಾನು ಒಂದು ನಿರಂತರವಾದ ಸಮರದಲ್ಲಿ ಸಿಲುಕಿರುವುದನ್ನು ಕಾಣುತ್ತದೆ. ಮೊದಲು ಶ್ರೀಮಂತಶಾಹಿಯೊಂದಿಗೆ; ಅನಂತರ ಬೂರ್ಜ್ವಾ ವರ್ಗಕ್ಕೇ ಸೇರಿದ ಕೆಲವು ಭಾಗಗಳೊಂದಿಗೆ, ಔದ್ಯಮಿಕ ಪ್ರಗತಿ ಅವರ ಹಿತಾಸಕ್ತಿಗಳಿಗೆ ಇದಿರಾಗುವುದರಿಂದಾಗಿ; ಮತ್ತು ಸದಾ ಎಲ್ಲ ಹೊರದೇಶಗಳ ಬೂರ್ಜ್ವಾ ವರ್ಗದೊಂದಿಗೆ. ಈ ಎಲ್ಲ ಸಮರಗಳಲ್ಲಿ, ಅದು ತಾನು ಶ್ರಮಜೀವಿ ವರ್ಗಕ್ಕೆ ಮನವಿ ಮಾಡಿಕೊಳ್ಳಲೇ ಬೇಕಾದ, ಅದರ ನೆರವು ಕೇಳಬೇಕಾದ ಮತ್ತು ಹಾಗೆ ಅದನ್ನು ರಾಜಕೀಯ ಅಖಾಡದೊಳಕ್ಕೆ ಎಳೆಯಬೇಕಾದ ಅನಿವಾರ್ಯತೆಗೆ ಒಳಗಾಗುವುದನ್ನು ಕಾಣುತ್ತದೆ. ಆದ್ದರಿಂದ ಬೂರ್ಜ್ವಾ ವರ್ಗವೇ ಶ್ರಮಜೀವಿ ವರ್ಗಕ್ಕೆ ತನ್ನದೇ ರಾಜಕೀಯ ಹಾಗೂ ಸಾರ್ವತ್ರಿಕ[20] ಶಿಕ್ಷಣದ ಮೂಲ ಅಂಶಗಳನ್ನು ಒದಗಿಸುತ್ತದೆ. ಬೇರೆ ಮಾತುಗಳಲ್ಲಿ, ಅದು ಶ್ರಮಜೀವಿ ವರ್ಗಕ್ಕೆ ಬೂರ್ಜ್ವಾ ವರ್ಗದ ವಿರುದ್ಧ ಹೋರಾಡಲು ಅಸ್ತ್ರಗಳನ್ನು ಒದಗಿಸಿಕೊಡುತ್ತದೆ.

ಇದೂ ಅಲ್ಲದೆ, ನಾವು ಈಗಾಗಲೇ ಕಂಡಂತೆ, ಆಳುವ ವರ್ಗಗಳ ಕೆಲವು ಇಡೀ ವಿಭಾಗಗಳೇ ಉದ್ದಿಮೆಗಳ ಮುನ್ನಡೆಯಿಂದಾಗಿ ಶ್ರಮಜೀವಿ ವರ್ಗದೊಳಕ್ಕೆ ಒತ್ತರಗೊಳ್ಳುತ್ತವೆ, ಇಲ್ಲವೇ ಕೊನೆಯಪಕ್ಷ ಅವುಗಳ ಅಸ್ತಿತ್ವದ ಪರಿಸ್ಥಿತಿಗಳೇ ಗಂಡಾಂತರಕ್ಕೆ ಗುರಿಯಾಗುತ್ತವೆ.

ಇವುಗಳೂ ಸಹ ಶ್ರಮಜೀವಿ ವರ್ಗಕ್ಕೆ ಜ್ಞಾನೋದಯ ಹಾಗೂ ಪ್ರಗತಿಯ ಮೂಲಾಂಶಗಳನ್ನು ಒದಗಿಸುತ್ತವೆ.[21]

ಕೊನೆಯದಾಗಿ, ವರ್ಗ ಹೋರಾಟವು ನಿರ್ಧಾರಕ ಘಳಿಗೆ ಸಮೀಪಿಸುವ ಕಾಲದಲ್ಲಿ, ಆಳುವ ವರ್ಗದೊಳಗೆ, ಅಷ್ಟೇ ಏಕೆ ಹಳೆಯ ಸಮಾಜದಾದ್ಯಂತ, ಜರುಗುತ್ತಿರುವ ವಿಸರ್ಜನೆಯ ಪ್ರಕ್ರಿಯೆಯು ಎಂತಹ ಹಿಂಸಾತ್ಮಕವಾದ, ಕಣ್ಣು ಕುಕ್ಕುವ ಸ್ವರೂಪವನ್ನು ಪಡೆದುಕೊಳ್ಳುತ್ತದೆಂದರೆ, ಆಳುವ ವರ್ಗದ ಒಂದು ಸಣ್ಣ ವಿಭಾಗವು ಅದರಿಂದ ತನ್ನನ್ನು ಕಡಿದುಕೊಂಡು, ದೂರ ಸರಿದು ಹೊರಬಂದು ಕ್ರಾಂತಿಕಾರೀ ವರ್ಗವನ್ನು, ಭವಿಷ್ಯತ್ತನ್ನು ತನ್ನ ಕೈಗಳಲ್ಲಿ ಹಿಡಿದು ಕೊಂಡಿರುವ ವರ್ಗವನ್ನು, ಸೇರಿಕೊಳ್ಳುತ್ತದೆ. ಆದ್ದರಿಂದ, ಅದಕ್ಕೆ ಹಿಂದಿನ ಕಾಲಾವಧಿಯಲ್ಲಿ ಕುಲೀನರ ಒಂದು ಭಾಗವು ಬೂರ್ಜ್ವಾ ವರ್ಗದ ಕಡೆಗೆ ಹೋದಂತೆ, ಈಗ ಬೂರ್ಜ್ವಾ ವರ್ಗದ ಒಂದು ಭಾಗವು, ಅದರಲ್ಲೂ ನಿರ್ದಿಷ್ಟವಾಗಿ ಬೂರ್ಜ್ವಾ ಸಿದ್ಧಾಂತಿಗಳ ಒಂದು ಭಾಗವು, ಐತಿಹಾಸಿಕ ಚಲನೆಯನ್ನು ಸೈದ್ಧಾಂತಿಕವಾಗಿ ಗ್ರಹಿಸುವ ಮಟ್ಟಕ್ಕೆ ತಮ್ಮನ್ನು ಎತ್ತರಿಸಿಕೊಂಡಿರುವ ಒಂದು ಭಾಗವು, ಶ್ರಮಜೀವಿ ವರ್ಗದ ಕಡೆಗೆ ಬರುತ್ತದೆ.

ಇಂದು ಬೂರ್ಜ್ವಾ ವರ್ಗಕ್ಕೆ ಮುಖಾಮುಖಿಯಾಗಿ ನಿಂತಿರುವ ಎಲ್ಲ ವರ್ಗಗಳಲ್ಲೂ, ಶ್ರಮಜೀವಿ ವರ್ಗ ಮಾತ್ರವೇ ಒಂದು ನಿಜಕ್ಕೂ ಕ್ರಾಂತಿಕಾರಿಯಾದ ವರ್ಗವಾಗಿದೆ. ಇತರ ವರ್ಗಗಳು ಆಧುನಿಕ ಉದ್ದಿಮೆಯ ಮುಂದೆ ಶಿಥಿಲಗೊಳ್ಳುತ್ತಾ, ಕೊನೆಗೆ ಕಣ್ಮರೆಯಾಗುತ್ತವೆ; ಶ್ರಮಜೀವಿ ವರ್ಗ ಅದರ ವಿಶಿಷ್ಟ ಮತ್ತು ಅನಿವಾರ್ಯ ಉತ್ಪನ್ನವಾಗಿದೆ.

ಕೆಳ ಮಧ್ಯಮವರ್ಗ, ಪುಟ್ಟ ತಯಾರಿಕೆಗಾರ, ಅಂಗಡಿಗಾರ, ಕೈಕಸುಬುದಾರ, ರೈತ, ಇವರೆಲ್ಲರೂ ಬೂರ್ಜ್ವಾ ವರ್ಗದ ವಿರುದ್ಧ ಮಧ್ಯಮ ವರ್ಗದ ತುಣುಕುಗಳಾಗಿ ತಮ್ಮ ಅಸ್ತಿತ್ವವು ಅಳಿಸಿ ಹೋಗದಂತೆ ಉಳಿಸಿಕೊಳ್ಳಲೋಸುಗ ಹೋರಾಡುತ್ತಾರೆ. ಆದ್ದರಿಂದ ಅವರು ಕ್ರಾಂತಿಕಾರಿ ಅಲ್ಲ, ಸಂಪ್ರದಾಯಶರಣರು. ಅಲ್ಲ, ಇನ್ನೂ ಹೆಚ್ಚಾಗಿ ಅವರು ಪ್ರತಿಗಾಮಿಗಳೂ ಹೌದು, ಏಕೆಂದರೆ, ಅವರು ಇತಿಹಾಸದ ಚಕ್ರವನ್ನು ಹಿಂದಕ್ಕೆ ತಿರುಗಿಸಲು ಯತ್ನಿಸುವವರು. ಅಕಸ್ಮಾತ್ತಾಗಿ ಅವರು ಕ್ರಾಂತಿಕಾರಿಗಳಾಗಿದ್ದರೆ, ಅವರು ಬಹು ಬೇಗನೆಯೇ ಶ್ರಮಜೀವಿಗಳಾಗಿ ಪರಿವರ್ತನೆಗೊಳ್ಳುವ ಕಾರಣದಿಂದಾಗಿಯಷ್ಟೆ ಹಾಗಿರುತ್ತಾರೆ. ಹೀಗೆ ಅವರು ಕಾಪಾಡಿಕೊಳ್ಳುವುದು ತಮ್ಮ ವರ್ತಮಾನದ್ದಲ್ಲ, ಬದಲಾಗಿ ಭವಿಷ್ಯತ್ತಿನ ಹಿತಗಳನ್ನು; ಅವರು ಶ್ರಮಜೀವಿ ವರ್ಗದ ನಿಲುವಿನಲ್ಲಿ ತಮ್ಮನ್ನು ಇರಿಸಿ ಕೊಳ್ಳಲು ತಮ್ಮದೇ ಸ್ವಂತ ನಿಲುವನ್ನು ತ್ಯಜಿಸುತ್ತಾರೆ.

"ಅಪಾಯಕಾರಿ" ಮತ್ತು ಸಾಮಾಜಿಕವಾಗಿ ಅಪ್ರಯೋಜಕರು[22], ಹಳೆಯ ಸಮಾಜದ ಅತ್ಯಂತ ಕೆಳಸ್ತರಗಳಿಂದ ಹೊರ ಹಾಕಲ್ಪಟ್ಟ ಆ ನಿಷ್ಕ್ರಿಯವಾಗಿ ಕೊಳೆಯುತ್ತಿರುವ ಜನಸಮೂಹವು, ಅಲ್ಲಿ ಇಲ್ಲಿ ಒಂದು ಶ್ರಮಜೀವಿ ಕ್ರಾಂತಿಯಿಂದಾಗಿ ಚಳವಳಿಯೊಳಕ್ಕೆ ಸೆಳೆಯಲ್ಪಡಬಹುದಾದರೂ, ಅದರ ಜೀವನ ಪರಿಸ್ಥಿತಿಗಳು ಅದನ್ನು ಹೆಚ್ಚಾಗಿ ಪ್ರತಿಗಾಮಿ ಒಳಸಂಚಿನ ಲಂಚತಿಂದ ಉಪಕರಣದ ಭಾಗವನ್ನಾಗಿಯೇ ಸಿದ್ಧಗೊಳಿಸುತ್ತವೆ.

ಶ್ರಮಜೀವಿ ವರ್ಗದ ಜೀವನ ಪರಿಸ್ಥಿತಿಗಳಲ್ಲಿ ಸಾಮಾನ್ಯವಾಗಿ ಹಳೆಯ ಸಮಾಜಕ್ಕೆ ಸಂಬಂಧಿಸಿದ ಅಂಶಗಳು ಆಗಲೇ ವಸ್ತುತಃ ಕೊಚ್ಚಿ ಹೋಗಿರುತ್ತವೆ. ಶ್ರಮಜೀವಿಯು ಆಸ್ತಿ ಇಲ್ಲದವನು; ಹೆಂಡತಿ ಮಕ್ಕಳೊಂದಿಗೆ ಅವನ ಸಂಬಂಧಗಳು ಈಗ ಬೂರ್ಜ್ವಾ ಕೌಟುಂಬಿಕ ಸಂಬಂಧಗಳಂತಿರುವುದಿಲ್ಲ; ಆಧುನಿಕ ಔದ್ಯಮಿಕ ಶ್ರಮವು, ಬಂಡವಾಳಕ್ಕೆ ಆಧುನಿಕ ಅಧೀನತೆಯು ಫ್ರಾನ್ಸಿನಲ್ಲಿದ್ದಂತೆ ಇಂಗ್ಲೆಂಡಿನಲ್ಲಿಯೂ, ಜರ್ಮನಿಯಲ್ಲಿದ್ದಂತೆ ಅಮೇರಿಕಾದಲ್ಲಿಯೂ ಶ್ರಮಜೀವಿಯಲ್ಲಿ ರಾಷ್ಟ್ರೀಯ ಲಕ್ಷಣದ ಗುರುತು ಸಹ ಇರದಂತೆ ಅಳಿಸಿ ಹಾಕಿರುತ್ತವೆ. ಕಾನೂನು, ನೈತಿಕತೆ, ಧರ್ಮ ಇವೆಲ್ಲ ಅವನಿಗೆ ಹಲವಾರು ಬೂರ್ಜ್ವಾ ಪೂರ್ವಾಗ್ರಹಗಳಷ್ಟೇ, ಬೂರ್ಜ್ವಾ ಹಿತಗಳಂತೆ ಹೊಂಚು ಹಾಕಿ ಕುಳಿತಿರುವಂತವು.

ಈ ಹಿಂದೆ ಮೇಲುಗೈ ಪಡೆದ ವರ್ಗಗಳೆಲ್ಲವೂ ಇಡೀ ಸಮಾಜವನ್ನು ತಮ್ಮ ಸ್ವಬಳಕೆಯ ಸ್ಥಿತಿ–ಗತಿಗಳಿಗೆ ಅಧೀನಗೊಳಿಸುವ ಮೂಲಕ ತಾವು ಆಗಲೇ ಗಳಿಸಿಕೊಂಡ ಸ್ಥಾನಮಾನವನ್ನು ಗಟ್ಟಿಗೊಳಿಸಿಕೊಳ್ಳಲು ಹವಣಿಸಿದವು. ಶ್ರಮಜೀವಿಗಳು ಸಮಾಜದ ಉತ್ಪಾದನಾ ಶಕ್ತಿಗಳ ಪ್ರಭುಗಳಾಗಬೇಕಾದರೆ, ಅದು ತಮ್ಮ ಈಗಿನ ಸ್ವಬಳಕೆ ವಿಧಾನವನ್ನು, ತನ್ಮೂಲಕ ಹಿಂದಿನ ಇತರ ಎಲ್ಲ ಸ್ವಬಳಕೆ ವಿಧಾನಗಳನ್ನು ರದ್ದುಗೊಳಿಸದ ವಿನಹ ಸಾಧ್ಯವಾಗದು. ಅವರಿಗೆ ಗಳಿಸಿಕೊಳ್ಳಲು, ಗಟ್ಟಿಗೊಳಿಸಿಕೊಳ್ಳಲು ತಮ್ಮ ಸ್ವಂತದ್ದು ಏನೂ ಇಲ್ಲ; ವೈಯಕ್ತಿಕ ಆಸ್ತಿಯ ಈ ಹಿಂದಿನ ಎಲ್ಲ ಭದ್ರತೆಗಳನ್ನು, ವಿಮೆಗಳನ್ನು ನಾಶಪಡಿಸುವುದೇ ಅವರ ಗುರಿಸಾಧನೆ.

ಇದಕ್ಕೆ ಮುನ್ನಿನ ಎಲ್ಲ ಐತಿಹಾಸಿಕ[23] ಆಂದೋಲನಗಳೂ ಅಲ್ಪಸಂಖ್ಯೆಯಲ್ಲಿರುವವರ ಆಂದೋಲನಗಳೇ ಆಗಿದ್ದವು ಅಥವಾ ಅಲ್ಪಸಂಖ್ಯೆಯಲ್ಲಿರುವವರ ಹಿತರಕ್ಷಣೆ ಮಾಡುವಂಥವೇ ಆಗಿದ್ದವು. ಶ್ರಮಜೀವಿ ಚಳವಳಿಯು ಸ್ವಯಂಪ್ರಜ್ಞೆ ಹೊಂದಿರುವ[24], ಅಪಾರ ಸಂಖ್ಯೆಯಲ್ಲಿರುವವರ, ಅವರ ಹಿತದೃಷ್ಟಿಯುಳ್ಳ ಸ್ವತಂತ್ರ ಆಂದೋಲನವಾಗಿದೆ. ಶ್ರಮಜೀವಿ ವರ್ಗ, ನಮ್ಮ ಇಂದಿನ ಸಮಾಜದ ಅತ್ಯಂತ ಕೆಳಸ್ತರ, ಅದರ ಮೇಲೆ ಒರಗಿರುವ ಅಧಿಕೃತ ಸಮಾಜದ ಸಮಸ್ತ ಸ್ತರವನ್ನು ಗಾಳಿಗೆ ತೂರದ ಹೊರತು ಕದಲಲಾರದು, ಎದ್ದು ನಿಲ್ಲಲಾರದು.

ಸತ್ವದಲ್ಲಲ್ಲವಾದರೂ, ಸ್ವರೂಪದಲ್ಲಾದರೂ, ಬೂರ್ಜ್ವಾ ವರ್ಗದೊಂದಿಗೆ ಶ್ರಮಜೀವಿ ವರ್ಗದ ಹೋರಾಟವು, ಮೊದಲಿಗೆ ಒಂದು ರಾಷ್ಟ್ರೀಯ ಹೋರಾಟವಾಗಿರುತ್ತದೆ. ಪ್ರತಿಯೊಂದು ದೇಶದ ಶ್ರಮಜೀವಿ ವರ್ಗ ಮೊಟ್ಟಮೊದಲಿಗೆ ತನ್ನ ಸ್ವಂತ ಬೂರ್ಜ್ವಾ ವರ್ಗದೊಂದಿಗೆ ಎಲ್ಲಾ ವಿಷಯಗಳನ್ನು ಬಗೆಹರಿಸಿ ಕೊಳ್ಳಬೇಕೆಂಬುದು ನಿಜ.

ಶ್ರಮಜೀವಿ ವರ್ಗದ ಬೆಳವಣಿಗೆಯ ಅತ್ಯಂತ ಸಾರ್ವತ್ರಿಕವಾದ ಮಜಲುಗಳನ್ನು ಚಿತ್ರಿಸುವಾಗ ನಾವು ಹೆಚ್ಚು ಕಮ್ಮಿ ಇಂದಿನ ಸಮಾಜದೊಳಗೆ ನಡೆಯುತ್ತಿರುವ ಮುಸುಕಿನ ಅಂತರ್ಯುದ್ಧವನ್ನು, ಈ ಯುದ್ಧವು ಬಹಿರಂಗ ಕ್ರಾಂತಿಯಾಗಿ ಭುಗಿಲೇಳುವ, ಬೂರ್ಜ್ವಾ ವರ್ಗದ ಹಿಂಸಾತ್ಮಕ ಪದಚ್ಯುತಿಯಿಂದ ಶ್ರಮಜೀವಿ ವರ್ಗದ ಅಂಕೆಗೆ ಅಡಿಪಾಯ ಹಾಕುವ ಅಂಶದ ವರೆಗೆ ಗುರುತಿಸಿದ್ದೇವೆ.

ಇಲ್ಲಿಯವರೆಗೂ, ಸಮಾಜದ ಪ್ರತಿಯೊಂದು ಸ್ವರೂಪವೂ, ನಾವೀಗಾಗಲೇ ಕಂಡಿರುವಂತೆ, ದಮನಿಸುವ ಮತ್ತು ದಮನಿತ ವರ್ಗಗಳ ವೈಷಮ್ಯವನ್ನು ಆಧರಿಸಿದ್ದವು. ಆದರೆ ವರ್ಗವೊಂದನ್ನು ದಮನ ಮಾಡಲು, ಕೊನೆಯ ಪಕ್ಷ ಅದರ ದಾಸ್ಯದ ಅಸ್ತಿತ್ವ ಮುಂದುವರಿಯಲು ಸಾಧ್ಯವಿರುವಂಥ ಕೆಲವೊಂದು ಪರಿಸ್ಥಿತಿಗಳನ್ನು ಖಚಿತಗೊಳಿಸಬೇಕು. ಜೀತ ವ್ಯವಸ್ಥೆಯ ಕಾಲಾವಧಿಯಲ್ಲಿ ಜೀತದಾಳು ತನ್ನನ್ನು ಬೀಡಿನ ಸದಸ್ಯತ್ವವನ್ನು ಪಡೆದುಕೊಳ್ಳುವ ಮಟ್ಟಕ್ಕೇರಿಸಿಕೊಂಡ, ಅದೇ ರೀತಿ ಪಾಳೆಯಗಾರೀ ನಿರಂಕುಶಾಧಿಕಾರದಲ್ಲಿ ಪುಟ್ಟ ಬಂಡವಾಳಿಗ ಬೂರ್ಜ್ವಾ ಆಗಿ ಬೆಳೆಯಲು ಸಾಧ್ಯವಾಯಿತು. ತದ್ವಿರುದ್ಧವಾಗಿ, ಆಧುನಿಕ ಶ್ರಮಿಕನು ಉದ್ದಿಮೆಯ ಪ್ರಗತಿಯೊಂದಿಗೆ ಮೇಲೇರುವ ಬದಲು ತನ್ನ ವರ್ಗವು ಅಸ್ತಿತ್ವದಲ್ಲಿರಲು ಅವಶ್ಯವಾದ ಪರಿಸ್ಥಿತಿಗಳಿಗಿಂತಲೂ ಕೆಳಕ್ಕೆ ಹೆಚ್ಚು ಹೆಚ್ಚು ಆಳಕ್ಕೆ ಮುಳುಗುತ್ತ ಹೋಗುತ್ತಾನೆ. ಅವನು ನಿರ್ಗತಿಕನಾಗುತ್ತಾನೆ. ಈ ನಿರ್ಗತಿಕತೆ ಜನಸಂಖ್ಯೆ ಹಾಗೂ ಸಂಪತ್ತಿಗಿಂತ ಹೆಚ್ಚು ತ್ವರಿತವಾಗಿ ಬೆಳೆಯತೊಡಗುತ್ತದೆ. ಮತ್ತು ಇಲ್ಲಿ, ಬೂರ್ಜ್ವಾ ಇನ್ನೆಷ್ಟು ಮಾತ್ರವೂ ಸಮಾಜದಲ್ಲಿ ಆಳುವ ವರ್ಗವಾಗಲು, ತನ್ನ ಅಸ್ತಿತ್ವದ ಸ್ಥಿತಿ-ಗತಿಗಳನ್ನು ಸಮಾಜದ ಮೇಲೆ ಎಲ್ಲವನ್ನೂ ಮೀರಿದ ಶಾಸನವನ್ನಾಗಿ ಹೇರಲು ಅಯೋಗ್ಯ ಎಂಬುದು ವಿದಿತವಾಗುತ್ತದೆ. ಅದು ಆಳಲು ಅಯೋಗ್ಯವಾಗುತ್ತದೆ, ಏಕೆಂದರೆ, ಅದು ತನ್ನ ದಾಸ ಅವನ ದಾಸ್ಯತ್ವದಲ್ಲೇ ಉಳಿದುಕೊಳ್ಳುವಂತೆ ನೋಡಿಕೊಳ್ಳಲು ಅಸಮರ್ಥವಾಗುತ್ತದೆ; ಏಕೆಂದರೆ ಅದು ಅವನಿಂದ ಹೊಟ್ಟೆ ತುಂಬಿಸಿಕೊಳ್ಳುವ ಬದಲು ಅವನ ಹೊಟ್ಟೆಯನ್ನೇ ತಾನು ತುಂಬಬೇಕಾದಂಥ ದುಸ್ಥಿತಿಗೆ ಅವನು ಇಳಿಯುವುದನ್ನು ತಪ್ಪಿಸಲು ಅಸಮರ್ಥವಾಗುತ್ತದೆ. ಸಮಾಜವು ಇನ್ನೆಷ್ಟು ಮಾತ್ರವೂ ಈ ಬೂರ್ಜ್ವಾ ವರ್ಗದಡಿ ಬಾಳಲಾರದಾಗುತ್ತದೆ. ಬೇರೆ ಮಾತುಗಳಲ್ಲಿ, ಅದರ ಅಸ್ತಿತ್ವವು ಸಮಾಜದೊಂದಿಗೆ ಎಷ್ಟು ಮಾತ್ರವೂ ಸರಿಹೊಂದದಾಗುತ್ತದೆ.

ಬೂರ್ಜ್ವಾ ವರ್ಗದ ಅಸ್ತಿತ್ವಕ್ಕೆ ಹಾಗೂ ಅದರ ಅಧಿಪತ್ಯಕ್ಕೆ ಅತ್ಯಗತ್ಯ ಶರತ್ತು ಎಂದರೆ[25] ಬಂಡವಾಳ ರಚನೆ ಮತ್ತು ಹಾಗೂ ಅದರ ವೃದ್ಧಿ; ಬಂಡವಾಳ ಇರಬೇಕಾದರೆ ಕೂಲಿ ಶ್ರಮ ಇರಬೇಕು. ಕೂಲಿ ಶ್ರಮ ಸಂಪೂರ್ಣವಾಗಿ ದುಡಿಮೆಗಾರರ ನಡುವಿನ ಪೈಪೋಟಿಯ ಮೇಲೆ ಆಧರಿಸಿರುತ್ತದೆ. ಬೂರ್ಜ್ವಾ ವರ್ಗವು ಅನೈಚ್ಛಿಕವಾಗಿಯೇ ಪ್ರೋತ್ಸಾಹಿಸುವ ಉದ್ದಿಮೆಯ ಮುನ್ನಡೆಯು, ಸ್ಪರ್ಧೆಯಿಂದಾಗಿ ಉಂಟಾಗುವ ದುಡಿಮೆಗಾರರ ಏಕಾಂಗಿತನದ ಜಾಗವನ್ನು ಸಂಘದಿಂದಾಗುವ ಅವರ ಕ್ರಾಂತಿಕಾರಿ ಸಂಯೋಜನೆಯು ಪಡೆಯುವಂತೆ ಮಾಡುತ್ತದೆ. ಆದ್ದರಿಂದ ಆಧುನಿಕ ಉದ್ದಿಮೆಯ ಬೆಳವಣಿಗೆಯು, ಬೂರ್ಜ್ವಾ ವರ್ಗ ಯಾವುದನ್ನು ಆಧರಿಸಿಕೊಂಡು ಉತ್ಪಾದಿಸುತ್ತದೋ, ಮತ್ತು ಉತ್ಪನ್ನಗಳನ್ನು ಸ್ವಾಧೀನಪಡಿಸಿಕೊಳ್ಳುತ್ತದೋ, ಅದನ್ನೇ ಅದರ ಕಾಲ ಕೆಳಗಿಂದ ಕಡಿದು ಬಿಡುತ್ತದೆ. ಆದ್ದರಿಂದ, ಬೂರ್ಜ್ವಾ ವರ್ಗ ಎಲ್ಲಕ್ಕೂ ಮಿಗಿಲಾಗಿ ಉತ್ಪಾದಿಸುವುದು ತನ್ನದೇ ಸಮಾಧಿಯ ಗುಂಡಿ ತೋಡುವವರನ್ನು. ಅದರ ಪತನ ಮತ್ತು ಶ್ರಮಜೀವಿ ವರ್ಗದ ವಿಜಯ ಇವೆರಡೂ ಸಮಾನ ರೀತಿಯಲ್ಲಿ ಅನಿವಾರ್ಯವಾಗುತ್ತವೆ.